# ಹಿಂದೂ ಮುಸ್ಲಿಂ ಭ್ರಮೆ ಮತ್ತು ವಾಸ್ತವ

ರಂಜಾನ್ ದರ್ಗಾ



ದ್ವೇಷ ಬಿಡ್ರಿ, ದೇಶ ಕಟ್ರಿ

HINDU MUSLIM BHRAME MATTU VASTAVA
by Ramjan Darga
Siddharoodha Colony,Madihal, Dharwad -580 006
Mobile: 8660173149
E-mail: ramjandarga@gmail.com

First Edition: 2024

Size: 1/8 th demy

Paper used: 70 GSM

Pages: 32

Price: Rs 10

Copies: 1000



Publisher: Vishvamanava Prakashana

Cover Design : Nabha Okkund

Printed at:
Manohar Printing Press
Market, Dharwad- 580001

# ಅರ್ಪಣೆ

ಸಹಸ್ರಾರು ವರ್ಷಗಳಿಂದ ತುಳಿತಕ್ಕೊಳಗಾದ
ಎಲ್ಲ ಜಾತಿ ಮತ್ತು ಧರ್ಮಗಳ ಕಷ್ಟಜೀವಿಗಳಿಗೆ.

ಭಾರತ ದೇಶ ಸ್ವತಂತ್ರವಾಗುವವರೆಗೆ ಐದಾರು ನೂರು ಸಂಸ್ಥಾನಗಳ, ಪಾಳೆಯಗಾರರ, ಜಮೀನುದಾರರ ಮತ್ತು ಜಹಗೀರದಾರರ ಹಿಡಿತದಲ್ಲಿತ್ತು. ನೀವಿರುವ ಅಕ್ಕ ಪಕ್ಕದ ಪ್ರದೇಶಗಳೂ ಸ್ವತಂತ್ರ ಸಂಸ್ಥಾನಗಳಾಗಿದ್ದವು. ಅವೇ ದೇಶಗಳಾಗಿದ್ದವು. ಆದರೆ ಅವೆಲ್ಲ ಕಷ್ಟಜೀವಿಗಳ ಸೇವೆಯ ಮೇಲೆಯೆ ಅವಲಂಬಿತವಾಗಿದ್ದವು. ಇಂಥ ಒಂದು ದೇಶದವರು ಇನ್ನೊಂದು ದೇಶದವರ ಮೇಲೆ ದಾಳಿ ಮಾಡುವಾಗ ಅವರ ಸೈನ್ಯ ನಿಮ್ಮ ಮೇಲೆ ದಾಳಿ ಮಾಡುತ್ತ ಭಯೋತ್ಪಾದನೆ ಸೃಷ್ಟಿಸುತ್ತಿತ್ತು. ವಿವಿಧ ಜಾತಿ ಧರ್ಮಗಳಲ್ಲಿ ಹರಿದು ಹಂಚಿಹೋದ ಮೂಲ ನಿವಾಸಿಗಳನ್ನು ದಾಳಿಕೋರರು ಕೊಲ್ಲುತ್ತಲೇ, ಅವರ ಗುಡಿಸಲುಗಳಿಗೆ ಬೆಂಕಿ ಹಚ್ಚುತ್ತಲೇ ವಿಜಯೋತ್ಸಾಹವನ್ನು ವ್ಯಕ್ತಪಡಿಸುತ್ತಿದ್ದರು. ಆದರೂ ನೀವು ಸಹಸ್ರಾರು ವರ್ಷಗಳಿಂದ ಉಪವಾಸ ವನವಾಸ ಜೀವ ಹಿಡಿದುಕೊಂಡು, ಹೊರಗಿನ ದಾಳಿಕೋರರು ಮತ್ತು ಒಳಗಿನ ದಾಳಿಕೋರರು ಸೃಷ್ಟಿಸಿದ ಎಲ್ಲ ದುರಂತ ಕಾಲಗಳನ್ನು ಎದುರಿಸುತ್ತ ಮುನ್ನಡೆದಿದ್ದೀರಿ. ನಿಮ್ಮ ಶಕ್ತಿ ಅದಮ್ಯವಾದುದು. ಎಲ್ಲ ಧರ್ಮ ಜಾತಿ ಜನಾಂಗಗಳ ರಾಜ ಮಹಾರಾಜರು ನೀವಿರುವ ತಾಣಗಳ ಮೇಲೆ ದಾಳಿ ಮಾಡಿದ್ದಾರೆ. ಪ್ರತಿಸಲ ಬಲಿಯಾಗುವವರು ನೀವೇ ಆಗಿದ್ದೀರಿ. 'ಕಷ್ಟಜೀವಿಗಳೆಲ್ಲ ಒಂದು. ಕಷ್ಟ ಕೊಡುವವರೆಲ್ಲ ಒಂದು' ಎಂಬ ಸತ್ಯವನ್ನು ಅರಿಯಲೆಂದೇ ಈ ಪುಸ್ತಿಕೆಯನ್ನು ಬರೆದು ನಿಮಗೆ ಅರ್ಪಿಸಿದ್ದೇನೆ. ದೇಶದಲ್ಲಿ ಪ್ರಜಾಪ್ರಭುತ್ವವಿದೆ. ನಮ್ಮದು ಗಣರಾಜ್ಯ ಎಂಬ ಹೆಮ್ಮೆ ಇದೆ. ನಮ್ಮ ಸಂವಿಧಾನ ನಮ್ಮ ಹಿತರಕ್ಷಣೆಗಾಗಿಯೇ ಇದೆ. ಆದರೆ ನಾವು ಯಾವುದನ್ನೂ ಅರ್ಥ ಮಾಡಿಕೊಳ್ಳದಂಥ ವಾತಾವರಣವನ್ನು ಜಾತಿ ಧರ್ಮಗಳ ಹೆಸರಲ್ಲಿ ಶೋಷಕರು ಸೃಷ್ಟಿಸಿದ್ದಾರೆ ಎಂಬುದನ್ನು ನೀವೆಲ್ಲ ಅರಿತರೆ ನನ್ನ ಶ್ರಮ ಸಾರ್ಥಕವಾಗುವುದು.

# ಹಿಂದೂ ಮುಸ್ಲಿಂ ಭ್ರಮೆ ಮತ್ತು ವಾಸ್ತವ

"ಭಾರತದ ಮೇಲಿನ ಮಹಮದೀಯರ ವಿಜಯವು ತುಳಿತಕ್ಕೊಳಗಾದವರ ಮತ್ತು ಬಡವರ ವಿಮೋಚನೆ ಎಂಬಂತೆ ಕಂಡುಬಂದಿತು. ನಮ್ಮ ಐದನೇ ಒಂದು ಭಾಗದಷ್ಟು ಜನರು ಮಹಮ್ಮದೀಯರಾದರು. ಇದೆಲ್ಲವನ್ನು ಖಡ್ಗದಿಂದ ಸಾಧಿಸಿದ್ದಲ್ಲ. ಇದೆಲ್ಲ ಖಡ್ಗ ಮತ್ತು ಬೆಂಕಿಯ ಕೆಲಸ ಎಂದು ಯೋಚಿಸುವುದು ಹುಚ್ಚುತನದ ಪರಮಾವಧಿ. ಜಮೀನುದಾರರು ಮತ್ತು ಅರ್ಚಕರಿಂದ ತಮ್ಮ ಸ್ವಾತಂತ್ರ್ಯವನ್ನು ಪಡೆಯಲು ಅವರು ಮತಾಂತರಗೊಂಡರು" ಎಂದು ಸ್ವಾಮಿ ವಿವೇಕಾನಂದ ಅವರು 19ನೇ ಶತಮಾನದಲ್ಲೇ ಹೇಳಿದ್ದಾರೆ.

ದೇಶದಲ್ಲಿ ಸೂಫಿಗಳು ಭೇಟಿ ನೀಡದ ಹಳ್ಳಿಗಳಿಲ್ಲ. ಅವರು ಭಾರತ ದೇಶದ ತುಂಬ ಸಹಬಾಳ್ವೆ ಮತ್ತು ಪ್ರೇಮತತ್ತ್ವವನ್ನು ಹರಡಿದರು. ಅವರು ಪವಿತ್ರ ಮಾನವರಾಗಿದ್ದರು. ಎಲ್ಲ ಜಾತಿ ಧರ್ಮಗಳಲ್ಲಿನ ಭಾರತೀಯರ ಮನಸ್ಸನ್ನು ಗೆದ್ದಿದ್ದರು. ಮುಸ್ಲಿಮರು ಬೇರೆ ಜನಾಂಗಗಳ ಜೊತೆ ಹೇಗೆ ಬಾಳಬೇಕು, ಸ್ಥಳೀಯ ಭಾಷೆಯನ್ನು ಕಲಿಯುವುದರ ಮೂಲಕ ಅವರ ಜೊತೆ ಹೇಗೆ ವ್ಯವಹರಿಸಬೇಕು, ಅವರ ಹಬ್ಬ ಉತ್ಸವಗಳಲ್ಲಿ ಕೂಡ ಹೇಗೆ ಭಾಗವಹಿಸಬೇಕು, ನಮ್ಮ ಧರ್ಮವನ್ನು ಹೇಗೆ ಪಾಲಿಸಬೇಕು, ಬೇರೆಯವರ ಧರ್ಮಗಳನ್ನು ಹೇಗೆ ಗೌರವಿಸಬೇಕು ಎಂಬುದನ್ನು ಕಲಿಸಿದರು.

ಪೈಗಂಬರರು ತಮ್ಮ ಹದೀಸ್‌ಗಳಲ್ಲಿ ಎರಡು ಕಡೆ ಭಾರತ ದೇಶವನ್ನು ಕೊಂಡಾಡಿದ್ದಾರೆ. 'ನಾನು ಅರಬಸ್ತಾನದಲ್ಲಿ ಇದ್ದೇನೆ. ಆದರೆ ಅರಬಸ್ತಾನ್ ನನ್ನೊಳಗೆ ಇಲ್ಲ. ನಾನು ಹಿಂದ್ (ಭಾರತ) ದೇಶದಲ್ಲಿ ಇಲ್ಲ. ಆದರೆ ಹಿಂದ್ ನನ್ನೊಳಗೆ ಇದೆ.' ಎಂದು ಒಂದು ಕಡೆ ಹೇಳಿದರೆ ಇನ್ನೊಂದು ಕಡೆ 'ಹಿಂದ್ ದೇಶದಿಂದ ನನ್ನೆಡೆಗೆ ತಂಪು ಗಾಳಿ (ಶಾಂತಿಯ ಸಂದೇಶ) ಬೀಸುತ್ತಿದೆ' ಎಂದು ತಿಳಿಸಿದ್ದಾರೆ.

ಪೈಗಂಬರರು ಅರಿತುಕೊಂಡಂಥ ಭಾರತದ ಪುನರ್ ನಿರ್ಮಾಣ ಆಗಬೇಕಿದೆ. ಶಾಂತಿ, ಅಹಿಂಸೆ, ಕ್ಷಮೆ ಹಾಗೂ ಆರ್ಥಿಕ ಚಿಂತನೆಗಳಿಂದ ಕೂಡಿದ ಜಕಾತ್ ಮೂಲಕ ಸಾಮಾಜಿಕ ಜವಾಬ್ದಾರಿ ಮುಂತಾದ ಉತ್ಕೃಷ್ಟ ಚಿಂತನೆಗಳು ಇಸ್ಲಾಂ ಧರ್ಮದ ಮೌಲ್ಯಗಳಾಗಿವೆ ಎಂಬುದನ್ನು ಅನ್ಯಧರ್ಮೀಯರಿಗೆ ತಿಳಿಸುವುದಷ್ಟೇ ಅಲ್ಲ; ಮುಸ್ಲಿಂ ಜನಸಮುದಾಯಕ್ಕೆ ಕೂಡ ಸರಿಯಾಗಿ ಹೇಳಬೇಕಾಗಿದೆ.

**ಷಾ ಬಾನು ಪ್ರಕರಣ ಮತ್ತು ತ್ರಿವಳಿ ತಲಾಖ್**

1985ರಲ್ಲಿ ಷಾ ಬಾನು ಪ್ರಕರಣ ಘಟಿಸುವುದಕ್ಕೆ ಮುಂಚೆ ಸ್ವತಂತ್ರ ಭಾರತದ ಮುಸ್ಲಿಮರು ಎಂದೂ ಇಷ್ಟೊಂದು ಅಭದ್ರತೆಯನ್ನು ಅನುಭವಿಸಿದ್ದಿಲ್ಲ. ದೇಶ ಇಬ್ಭಾಗವಾದ ನಂತರ ಅನೇಕ ಕೋಮುಗಲಭೆಗಳಾದರೂ ಮುಸ್ಲಿಮರು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಉಳಿಸಿಕೊಂಡಿದ್ದರು. ಆದರೆ ಷಾ ಬಾನು ಪ್ರಕರಣದ ನಂತರ ಭಾರತೀಯ ಮುಸ್ಲಿಮರು ಹಿಂದೆಂದೂ ಅನುಭವಿಸದಂಥ ಕಷ್ಟನಷ್ಟಗಳನ್ನು ಅನುಭವಿಸುತ್ತಿದ್ದಾರೆ. ಅಘೋಷಿತ ಎರಡನೇ ದರ್ಜೆ ನಾಗರಿಕರಾಗಿ ಬದುಕುವಂಥ ಸ್ಥಿತಿಗೆ ಇಳಿದಿದ್ದಾರೆ.

**ಹಿನ್ನೆಲೆ:** ಇಂದೋರಿನ ವಕೀಲ ಮಹಮ್ಮದ್ ಅಹಮ್ಮದ್ ಖಾನ್ ಜೊತೆ ಷಾ ಬಾನು ವಿವಾಹ 1932ರಲ್ಲಿ ಆಗಿತ್ತು. 1975ರಲ್ಲಿ 70 ವರ್ಷದ ಆಕೆಯನ್ನು 43 ವರ್ಷಗಳ ವೈವಾಹಿಕ ಜೀವನದ ನಂತರ ಗಂಡನಾದವನು ಮರು ಮದುವೆಯಾಗಿ, ಷಾ ಬಾನುಗೆ ತ್ರಿವಳಿ ತಲಾಖ್ ಹೇಳಿ ಬೀದಿಗಟ್ಟಿದ. ನಿರಕ್ಷರಿ ಷಾ ಬಾನು ಸುಪ್ರೀಂ ಕೋರ್ಟ್‌ವರೆಗೂ ಹೋಗಿ ಪ್ರಕರಣ ಗೆದ್ದಳು.

ಷಾ ಬಾನು ಪ್ರಕರಣಕ್ಕೆ ಸಂಬಂಧಿಸಿದಂತೆ 1985ನೇ ಏಪ್ರಿಲ್ 23ರಂದು ಸುಪ್ರೀಂ ಕೋರ್ಟ್ ತೀರ್ಪು ನೀಡಿ, 'ಅಪರಾಧ ದಂಡ ಸಂಹಿತೆಯ 125ನೇ ವಿಧಿ ಪ್ರಕಾರ ವಿವಾಹ ವಿಚ್ಛೇದನ ಹೊಂದಿದ ಹೆಂಡತಿಗೆ ಗಂಡನಾಗಿದ್ದವನು; ಆಕೆ ಬೇರೆ ಮದುವೆ ಆಗುವವರೆಗೆ ಜೀವನಾಂಶ ಕೊಡಬೇಕು.' ಎಂದು ಸಾರಿತು. ಜೀವನಾಂಶದ ಮೊತ್ತ ಕೇವಲ 177 ರೂಪಾಯಿ 20 ಪೈಸೆ ಇತ್ತು! "ವಿವಾಹ ವಿಚ್ಛೇದನ ಮಾಡಲ್ಪಟ್ಟ ಸ್ತ್ರೀಯರಿಗೆ ವಾಡಿಕೆಯಂತೆ ಜೀವನೋಪಾಯಕ್ಕೆ ಏನಾದರೂ ಕೊಡಬೇಕು. ಇದು ದೈವಭಕ್ತರ ಮೇಲಿರುವ ಬಾಧ್ಯತೆಯಾಗಿದೆ." ಎಂಬ ಕುರಾನಿನ 2ನೇ ಸೂರಾದ 241ನೇ ಆಯತ್‌ಗೆ ಮತ್ತು ಅಪರಾಧ ದಂಡ ಸಂಹಿತೆಯ 125ನೇ ವಿಧಿಗೆ ಯಾವುದೇ ವ್ಯತ್ಯಾಸವಿಲ್ಲ ಎಂದು ತೀರ್ಪಿನಲ್ಲಿ ತಿಳಿಸಿತು.

'ಸುಶೀಲೆಯರಾದ ಸ್ತ್ರೀಯರ ಮೇಲೆ ಯಾರು ಆರೋಪ ಹೊರಿಸುತ್ತಾರೊ ಮತ್ತು ನಾಲ್ಕು ಮಂದಿ ಸಾಕ್ಷಿದಾರರನ್ನು ಅವರು ತರುವುದಿಲ್ಲವೊ ಅವರಿಗೆ ಎಂಬತ್ತು ಬಾರೇಟುಗಳನ್ನು ಹೊಡೆಯಿರಿ ಮತ್ತು ಅವರ ಸಾಕ್ಷ್ಯಗಳನ್ನು ಸ್ವೀಕರಿಸಬೇಡಿರಿ. ಅವರೇ ಧರ್ಮಭ್ರಷ್ಟರು' (24 : 4) ಎಂದು ಕುರಾನ್ ತಿಳಿಸಿದೆ.

ವಯೋವೃದ್ಧೆಯಾಗಿದ್ದ ಷಾ ಬಾನು ಮೇಲೆ ಆರೋಪ ಹೊರಿಸಲು ಸಾಧ್ಯವೇ ಇಲ್ಲ. ಆಕೆಯ ಮೇಲೆ ಆರೋಪ ಹೊರಿಸುವುದಕ್ಕಾಗಿ ನಾಲ್ಕು ಮಂದಿ ಸಾಕ್ಷಿದಾರರನ್ನು ತರಲು ಸಾಧ್ಯವಿಲ್ಲ. ಆದ್ದರಿಂದ ಹೆಂಡತಿಯನ್ನು ಬೀದಿಗಟ್ಟಿದ ಮಹಮ್ಮದ್ ಅಹಮ್ಮದ್ ಖಾನ್‌ಗೆ 80 ಛಡಿ ಏಟು ಬೀಳಬೇಕಾಗಿತ್ತು. ಆದರೆ ಮೂಲಭೂತವಾದಿಗಳು ಮುಸ್ಲಿಂ ಜನಸಮುದಾಯವನ್ನು ಷಾ ಬಾನು ವಿರುದ್ಧ ಎತ್ತಿ ಕಟ್ಟಿದರು. 'ಇಸ್ಲಾಂ ಗಂಡಾಂತರದಲ್ಲಿದೆ' ಎಂದು ಇಡೀ ದೇಶದ ತುಂಬ ಗುಲ್ಲೆಬ್ಬಿಸಿದರು. ದೇಶ ಹೊತ್ತಿ ಉರಿಯುವಂಥ ವಾತಾವರಣ ನಿರ್ಮಾಣವಾಯಿತು. ಪ್ರಧಾನಿಯಾಗಿದ್ದ

ರಾಜೀವ್ ಗಾಂಧಿ ಗಾಬರಿಗೊಂಡರು. ಕೊನೆಗೆ ಮುಸ್ಲಿಂ ಮಹಿಳೆ ಇನ್ನೂ ಹೀನಾಯ ಸ್ಥಿತಿಗೆ ಇಳಿಯುವಂಥ ಮುಸ್ಲಿಂ ಮಹಿಳೆಯರ ಮಸೂದೆಯನ್ನು 1986ರಲ್ಲಿ ಲೋಕಸಭೆಯಲ್ಲಿ ಮಂಡಿಸಲಾಯಿತು!

ಮುಸ್ಲಿಂ ಮೂಲಭೂತವಾದಿಗಳು ಮಾಡಿದ ಮಹಾ ತಪ್ಪಿನಿಂದಾಗಿ ಮುಸ್ಲಿಮರು ತಮ್ಮ ಅಭಿವ್ಯಕ್ತಿ ಸ್ವಾಂತಂತ್ರ್ಯವನ್ನು ಕಳೆದುಕೊಳ್ಳುವಂಥ ಪರಿಸ್ಥಿತಿ ದಿನೇ ದಿನೇ ಹೆಚ್ಚಾಗತೊಡಗಿತು. ಹಿಂದುತ್ವವಾದಿಗಳು ಹೆಚ್ಚು ಹೆಚ್ಚು ಪ್ರಬಲವಾಗತೊಡಗಿದರು. ಕೊನೆಗೆ 1992ರಲ್ಲಿ ಬಾಬರಿ ಮಸೀದಿ ಬೀಳಿಸುವವರೆಗೆ ಪರಿಸ್ಥಿತಿ ವಿಕೋಪಕ್ಕೆ ಹೋಯಿತು.

ಇನ್ನು 'ತ್ರಿವಳಿ ತಲಾಖ್ ಇಸ್ಲಾಂ ಧರ್ಮಕ್ಕೆ ವಿರುದ್ಧವಾಗಿದೆ' ಎಂಬ ಕನಿಷ್ಠ ಪ್ರಜ್ಞೆಯೂ ಈ ಮೂಲಭೂತವಾದಿಗಳಿಗೆ ಇಲ್ಲ. ಪಾಕಿಸ್ತಾನದಲ್ಲಿ ಕೂಡ ಈ ರೀತಿಯ ಅಸಹ್ಯ ವ್ಯವಸ್ಥೆ ಇಲ್ಲ. ಇಂಥ ಸಮಸ್ಯೆಗಳಿಗಾಗಿಯೇ ಅಲ್ಲಿ ಮಂಡಳಿಯೊಂದನ್ನು ರಚಿಸಲಾಗಿದೆ. ಪುರುಷರು ತ್ರಿವಳಿ ತಲಾಖ್ ಕೊಡುವುದು ಮತ್ತು ಮರುಮದುವೆಯಾಗುವುದು ಅಲ್ಲಿ ಸಾಧ್ಯವಿಲ್ಲ. ಏನಿದ್ದರೂ ಮಂಡಳಿ ಅನುಮತಿ ನೀಡಿದಾಗ ಮಾತ್ರ ಆಗಲು ಸಾಧ್ಯ. ಆದರೆ ಭಾರತದಲ್ಲಿ ಮೂಲಭೂತವಾದಿಗಳ ಮೂರ್ಖತನವನ್ನು ಮೋದಿ ಚೆನ್ನಾಗಿ ಬಳಸಿಕೊಂಡು ಮುಸ್ಲಿಂ ಮಹಿಳೆಯರ ಮತಗಳನ್ನು ಎಳೆಯುವ ಚಾಣಾಕ್ಷತನವನ್ನು ತೋರಿಸಿದರು.

**ದೇಶ ವಿಭಜನೆಯ ತೊಡಕು**

ದೇಶದ ವಿಭಜನೆಯ ಕುರಿತು ಕೋಮುವಾದಿಗಳು ಭಾರತೀಯ ಮುಸ್ಲಿಮರನ್ನು ಪದೆ ಪದೆ ಹೀಯಾಳಿಸುತ್ತಲೇ ಇರುತ್ತಾರೆ. 'ನೀವೇ ಬಯಸಿದ ದೇಶವಾದ ಪಾಕಿಸ್ತಾನಕ್ಕೆ ಹೋಗಿರಿ' ಎಂದು ಹೇಳುವಷ್ಟರ ಮಟ್ಟಿಗೆ ನೀಚತನವನ್ನು ಪ್ರದರ್ಶಿಸುತ್ತಿದ್ದಾರೆ. ದೇಶ ವಿಭಜನೆಯನ್ನು ಯಾರು ಬಯಸಿದ್ದರು? ಬಯಸಿದವರು ಉತ್ತರ ಪ್ರದೇಶದ ಜಮೀನುದಾರರು ಮತ್ತು ಜಿನ್ನಾರಂಥ ಮುಸ್ಲಿಂ ರಾಜಕಾರಣಿಗಳು. ಹಿಂದೂ ಕೋಮುವಾದಿ ರಾಜಕಾರಣಿಗಳಿಗೂ ಇದೇ ಬೇಕಾಗಿತ್ತು. ಈಗ ಪಾಕಿಸ್ತಾನದಲ್ಲಿ ಮತ್ತು ಬಾಂಗ್ಲಾದೇಶ (ಹಿಂದಿನ ಪೂರ್ವ ಪಾಕಿಸ್ತಾನ)ಗಳಲ್ಲಿ ಇದ್ದ ಜನಸಾಮಾನ್ಯರಿಗೂ ಇದು ಬೇಕಾಗಿರಲಿಲ್ಲ. ಇವರಾರೂ ಪ್ರತ್ಯೇಕ ದೇಶ ಬೇಡಿರಲಿಲ್ಲ. ಆದರೂ ಸ್ವಾರ್ಥಕ್ಕಾಗಿ ದೇಶ ಇಬ್ಭಾಗವಾಯಿತು. ನಾವು ಮತ್ತು ಅವರು ಬೇರೆ ಆದೆವು. ಅಧಿಕಾರ ದಾಹದ ಮುಸ್ಲಿಂ ರಾಜಕಾರಣಿಗಳು ಹಾಗೂ ಬಿಹಾರ ಮತ್ತು ಉತ್ತರ ಪ್ರದೇಶದ ಕಡೆಗಳಲ್ಲಿನ ಕೆಲ ಕಡುಬಡವ ಮುಸ್ಲಿಮರು; ಬದುಕು ಸುಧಾರಿಸುವುದು ಎಂಬ ಆಸೆಯೊಂದಿಗೆ ಪಾಕಿಸ್ತಾನಕ್ಕೆ ಹೋದರು.

**ಕಾಶ್ಮೀರ ಪ್ರಶ್ನೆ**

ಕಾಶ್ಮೀರದ ಮಹಾರಾಜ ಹರಿಸಿಂಗ್ ಕಾಶ್ಮೀರನ್ನು ಸ್ವತಂತ್ರ ದೇಶವಾಗಿ ಉಳಿಸಿಕೊಂಡರು. ದೇಶ ವಿಭಜನೆಯಾದ ನಂತರ 1947ನೇ ಅಕ್ಟೋಬರ್ 22ರಂದು

ಕಾಶ್ಮೀರದ ಮೇಲೆ ಪಾಕಿಸ್ತಾನ ಆಕ್ರಮಣ ಮಾಡಿತು. ಆಗ ಕಾಶ್ಮೀರ ಸ್ವತಂತ್ರ ದೇಶವಾಗಿದ್ದರಿಂದ ಭಾರತದ ಸೈನ್ಯ ಪಾಕಿಸ್ತಾನದ ವಿರುದ್ಧ ಯುದ್ಧ ಮಾಡುವಂತಿರಲಿಲ್ಲ. ಕಾಶ್ಮೀರದ ಮುಸ್ಲಿಂ ಯುವಕರು 'ಜನತಾ ಸೈನ್ಯ' ಕಟ್ಟಿಕೊಂಡು ಪಾಕಿಸ್ತಾನಿ ಸೈನಿಕರನ್ನು ಎದುರಿಸಿದರು. ಕೊನೆಗೆ ಕಾಶ್ಮೀರ ಷರತ್ತುಗಳೊಂದಿಗೆ ಭಾರತದ ಭಾಗವಾಯಿತು. ಆದರೆ ವಿಶ್ವಸಂಸ್ಥೆಯ ಮಧ್ಯಸ್ಥಿಕೆಯಿಂದಾಗಿ 'ಲೈನ್ ಆಫ್ ಕಂಟ್ರೋಲ್' ಅಸ್ತಿತ್ವಕ್ಕೆ ಬಂದು; ಪಾಕ್ ಆಕ್ರಮಿತ ಕಾಶ್ಮೀರ ಅದರದೇ ಭಾಗವಾಗಿ ಉಳಿದು ಸಮಸ್ಯೆ ಸೃಷ್ಟಿಯಾಯಿತು.

ಮಹಾರಾಜಾ ಹರಿಸಿಂಗ್ ಭಾರತದಿಂದ ದೂರ ಉಳಿಯಲು ಯತ್ನಿಸಿದ್ದಕ್ಕಾಗಿಯೆ ಈ ಸಮಸ್ಯೆ ಇಂದು ಹಿಮಾಲಯದ ಗಾತ್ರದಷ್ಟು ಬೆಳೆದಿದೆ. ಕಾಶ್ಮೀರಿ ಪಂಡಿತರು ಮತ್ತು ಮುಸ್ಲಿಮರು ಎಲ್ಲ ರೀತಿಯ ಅತಂತ್ರ ಬದುಕನ್ನು ಅನುಭವಿಸುತ್ತಿದ್ದಾರೆ. ಅವರು ಅನ್ಯೋನ್ಯವಾಗಿ ಬದುಕಿದ್ದನ್ನು ಯಾರೂ ಗಮನಿಸಲಿಲ್ಲ. ಉಗ್ರಗಾಮಿಗಳು ಕಾಶ್ಮೀರ ಪಂಡಿತರಿಗಿಂತಲೂ ಹತ್ತಾರು ಪಟ್ಟು ಹೆಚ್ಚು ಮುಸ್ಲಿಮರನ್ನು ಕೊಂದರು. ಧರ್ಮಗಳ ಮಧ್ಯೆ ಬಿರುಕುಂಟು ಮಾಡಿದರು. ಕೋಮುವಾದಿಗಳು ಅದರ ಲಾಭ ಪಡೆದು ಪರಿಸ್ಥಿತಿಯನ್ನು ಇನ್ನೂ ಉಲ್ಬಣಗೊಳಿಸಿದರು.

**ಸ್ವಾತಂತ್ರ್ಯ ಹೋರಾಟ**

ಸ್ವಾತಂತ್ರ್ಯ ಹೋರಾಟದಲ್ಲಿ ಸಹಸ್ರಾರು ಮುಸ್ಲಿಮರು, ಹಿಂದುಗಳು ಮುಂತಾದವರು ಆಸ್ತಿಪಾಸ್ತಿ ಮತ್ತು ಜೀವ ಕಳೆದುಕೊಂಡಿದ್ದಾರೆ. ಶಿಕ್ಷೆ ಅನುಭವಿಸಿದ್ದಾರೆ. ಆದರೆ 1925ರಲ್ಲಿ ಹುಟ್ಟಿದ ಸಂಘಪರಿವಾರದ ಒಬ್ಬನೂ ಹುತಾತ್ಮನಾದ ದಾಖಲೆ ಇಲ್ಲ! 1942ರ ಚಲೇಜಾವ್ ಚಳವಳಿಯಲ್ಲಿ ಯುವಕರಾಗಿದ್ದ ಅಟಲ್ ಬಿಹಾರಿ ವಾಜಪೇಯಿ ಅವರು ಆಗ್ರಾ ಬಳಿಯ ಬಟೇಶ್ವರ ಗ್ರಾಮದಲ್ಲಿ ಇಬ್ಬರು ಸ್ವಾತಂತ್ರ್ಯ ಹೋರಾಟಗಾರರ ಬಂಧನವಾಗಲಿಕ್ಕೆ ಕಾರಣವಾಗಿದ್ದರ ದಾಖಲೆ ಕೇಂದ್ರ ಪತ್ರಾಗಾರದಲ್ಲಿದೆ. ಅದನ್ನು ಹೊರಗೆ ಹಾಕಿದವರು ಈಗ ಭಾರತೀಯ ಜನತಾ ಪಕ್ಷದಲ್ಲಿರುವ ಸುಬ್ರಮಣಿಯನ್‌ಸ್ವಾಮಿ!

ಎಲ್ಲ ಜನಾಂಗಗಳ ಕೋಟ್ಯಂತರ ಜನರ ಸಹಸ್ರಾರು ವರ್ಷಗಳ ನಿರಂತರ ಶ್ರಮದಿಂದ ಭಾರತ ದೇಶದ ನಾಗರಿಕತೆ ಮತ್ತು ಬಹುತ್ವ ಸಂಸ್ಕೃತಿ ರೂಪುಗೊಂಡಿವೆ. ರೈತರು, ಕಾರ್ಮಿಕರು ಮೊದಲು ಮಾಡಿ ಎಲ್ಲ ಜಾತಿ, ಧರ್ಮ ಮತ್ತು ವರ್ಗಗಳ ಜನರ ಕೊಡುಕೊಳ್ಳುವಿಕೆಯ ಮೂಲಕ ಈ ದೇಶ ಮುನ್ನಡೆದಿದೆ.

ದೇಶದಲ್ಲಿ ಸ್ವಾತಂತ್ರ್ಯಾನಂತರ ಕೂಡ 35 ಸಾವಿರಕ್ಕೂ ಹೆಚ್ಚು ಕೋಮುಗಲಭೆಗಳು ಮತ್ತು ಉಗ್ರಗಾಮಿಗಳ ದುಷ್ಕೃತ್ಯಗಳು ನಡೆದು ಸಹಸ್ರಾರು ಅಮಾಯಕರು ಜೀವ ಕಳೆದುಕೊಂಡಿದ್ದಾರೆ. ಅನೇಕ ಕುಟುಂಬಗಳು ಅನಾಥವಾಗಿವೆ.

ದೇಶದ ಸ್ವಾತಂತ್ರ್ಯಕ್ಕಾಗಿ ಎಲ್ಲ ಜನಾಂಗಗಳು ಹೋರಾಡಿವೆ. ಎಲ್ಲ ಜನಾಂಗಗಳಲ್ಲೂ ಹುತಾತ್ಮರಾಗಿದ್ದಾರೆ. ಭಾರತ ದೇಶ ಸಹಜವಾಗಿಯೆ ಇಲ್ಲಿ ಬದುಕುವ ಎಲ್ಲ

ನಾಗರಿಕರ ಸೊತ್ತಾಗಿದೆ. ಆದರೆ ಯಥಾಸ್ಥಿತಿವಾದಿಗಳ ಕೈಗೊಂಬೆಗಳಾಗಿರುವ ಕೋಮುವಾದಿ ಮತ್ತು ಉಗ್ರಗಾಮಿ ಶಕ್ತಿಗಳು ದೇಶದ ಬಹುತ್ವ ಸಂಸ್ಕೃತಿಗೆ ಧಕ್ಕೆಯನ್ನುಂಟು ಮಾಡುತ್ತ ಭಾವೈಕ್ಯವನ್ನು ಹಾಳು ಮಾಡುವುದರಲ್ಲಿ ತಲ್ಲೀನವಾಗಿವೆ. ಈ ದುಷ್ಟಶಕ್ತಿಗಳಿಂದಾಗಿ ದೇಶದ ಜನರಲ್ಲಿ ಆತಂಕ ಮೂಡುತ್ತಿದೆ.

### ದ್ವೇಷ ಸಂಸ್ಕೃತಿ

ದೇಶದ ಬಹುತ್ವ ಸಂಸ್ಕೃತಿಯನ್ನು ಕೋಮುವಾದಿಗಳ ಮತ್ತು ಉಗ್ರಗಾಮಿಗಳ ದ್ವೇಷಸಂಸ್ಕೃತಿ ಹಾಳು ಮಾಡುತ್ತಿದೆ. ಕೋಮುವಾದಿ ಶಕ್ತಿಗಳು ಧರ್ಮಗಳ ಹೆಸರಿನಲ್ಲಿ ಭಾರತೀಯ ಸಮಾಜವನ್ನು ಒಡೆಯುವ ಮೂಲಕ ಸಂಪೂರ್ಣವಾಗಿ ಅಧಿಕಾರದ ಗದ್ದುಗೆ ಏರಲು ಹವಣಿಸುತ್ತಿವೆ. ದೇಶದ ಸರ್ವತೋಮುಖ ಅಭಿವೃದ್ಧಿಯ ಬದಲಿಗೆ ಕೆಲವೇ ಕೆಲವು ಬಂಡವಾಳಶಾಹಿಗಳು ಲಕ್ಷ ಲಕ್ಷ ಕೋಟಿ ರೂಪಾಯಿ ಲಾಭ ಪಡೆಯುವಂಥ ಸ್ಥಿತಿಯನ್ನು ಕೋಮುವಾದಿ ಪ್ರಭುತ್ವ ನಿರ್ಮಾಣ ಮಾಡಿದೆ. ಕೇಂದ್ರ ಸರ್ಕಾರವೇ ಬಂಡವಾಳಶಾಹಿಗಳ ಪರವಾಗಿ ನಿಂತಿದೆ. ಅಲ್ಪಸ್ವಲ್ಪ ಸಾಲ ಮಾಡಿದ ಸಹಸ್ರಾರು ರೈತರು ಕೂಡ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅವರ ಕುಟುಂಬಗಳು ಬೀದಿಪಾಲಾಗಿವೆ.

ಭಾರತದಲ್ಲಿ ಅಭಿವೃದ್ಧಿ ಎಂದರೆ ಬಂಡವಾಳಶಾಹಿಗಳನ್ನು ಸಾಮ್ರಾಜ್ಯಶಾಹಿಗಳ ಜೊತೆಗಾರರನ್ನಾಗಿ ಮಾಡಿ, ಅವರ ಏಳ್ಗೆಗಾಗಿ ಶ್ರಮಿಸುವುದು. ಇಂಥ ಅನೈತಿಕ ಫಲಾನುಭವಿಗಳೆಲ್ಲ ಸೇರಿ ಚುನಾವಣೆಯಲ್ಲಿ ಎಲ್ಲರೀತಿಯ ವ್ಯವಸ್ಥೆ ಮಾಡುವಂತೆ ನೋಡಿಕೊಳ್ಳುವುದು ಇಂದಿನ ಚಾಣಾಕ್ಷ ರಾಜಕಾರಣವಾಗಿದೆ. ಬಹುಸಂಖ್ಯಾತ ಹಿಂದುಗಳು ಇಂಥ ದುಸ್ಥಿತಿಯ ಕಾರಣ ಸಿಡಿದೇಳುತ್ತಾರೆ ಎಂಬುದೂ ಅವರಿಗೆ ಗೊತ್ತಿದೆ. ಆದ್ದರಿಂದ ಅವರ ಮನಸ್ಸನ್ನು ಕೋಮುದ್ವೇಷದ ಕಡೆಗೆ ಹೊರಳಿಸುವಂಥ ವಾತಾವರಣ ಸೃಷ್ಟಿಸುತ್ತಾರೆ.

### ಧರ್ಮವಂತರು ಮತ್ತು ಧರ್ಮವಾದಿಗಳು

ಇಂದಿನ ರಾಜ್ಯಶಕ್ತಿ ಎಲ್ಲ ಕ್ಷೇತ್ರಗಳ ಶಕ್ತಿಗಳನ್ನು ತನ್ನ ಕೈವಶ ಮಾಡಿಕೊಳ್ಳುತ್ತಿದೆ. ಪ್ರಜಾಪ್ರಭುತ್ವದ ಎಲ್ಲ ಅಂಗಗಳನ್ನು ತನ್ನ ಅಧೀನದಲ್ಲಿರುವಂತೆ ನೋಡಿಕೊಳ್ಳುತ್ತಿದೆ. 'ಇ.ವಿ.ಎಂ. ಬೇಡ, ಬ್ಯಾಲೆಟ್ ಪೇಪರ್ ಮೂಲಕ ಚುನಾವಣೆ ನಡೆಸಬೇಕು' ಎಂದು ದೇಶಾದ್ಯಂತ ಜನ ಹೇಳುತ್ತಿದ್ದಾರೆ. ಚಳವಳಿಗಳು ಕೂಡ ಆಗುತ್ತಿವೆ. ಆದರೂ ಜನಾಭಿಪ್ರಾಯಕ್ಕೆ ಬೆಲೆ ಇಲ್ಲದಂತಾಗಿದೆ. ಏತನ್ಮಧ್ಯೆ ಐ.ಟಿ. ಮತ್ತು ಇ.ಡಿ. ಇಲಾಖೆಗಳ ಬಳಕೆ ನೋಡಿದರೆ ದೇಶದಲ್ಲಿ ಸರ್ವಾಧಿಕಾರದ ದಿನಗಳು ದೂರ ಇಲ್ಲ ಎನಿಸುತ್ತದೆ.

ಯುವಕರಿಗೆ ಸರ್ಕಾರ ಸುಳ್ಳು ಭರವಸೆಗಳನ್ನು ಕೊಡುತ್ತಿದೆ. ಜನರು ಸಹಜವಾಗಿಯೆ ಧರ್ಮವಂತರಾಗಿದ್ದಾರೆ. ಆದರೆ ಅವರನ್ನು ಧರ್ಮವಾದಿಗಳನ್ನಾಗಿಸುವಲ್ಲಿ ಸರ್ಕಾರ ತಲ್ಲೀನವಾಗಿದೆ. ಬಂಡವಾಳವಾದ ಮತ್ತು ಕೋಮುವಾದ ಒಂದಕ್ಕೊಂದು

ಪೂರಕವಾಗಿ ಕಾರ್ಯನಿರತವಾಗಿದ್ದು ಜನರು ಬಡತನವನ್ನು ಮತ್ತು ಕೋಮು ರಾಜಕಾರಣವನ್ನು ಏಕಕಾಲಕ್ಕೆ ಎದುರಿಸುವ ವಾತಾವರಣ ಸೃಷ್ಟಿಯಾಗಿದೆ. ಧರ್ಮಗಳ ಹೆಸರಿನಲ್ಲಿ ಸಮಾಜವಿರೋಧಿ ಶಕ್ತಿಗಳು ದೈನಂದಿನ ಬದುಕನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಳ್ಳಲು ಯತ್ನಿಸುತ್ತಿವೆ. ಇಂಥ ವಿಷಮ ಪರಿಸ್ಥಿತಿ ಸರ್ವಾಧಿಕಾರಿ ವ್ಯವಸ್ಥೆಯನ್ನು ತರಲು ಪೂರಕವಾಗಿದೆ. ಇದಕ್ಕೆ ವಿರುದ್ಧವಾಗಿ ಜನರನ್ನು ಜಾತ್ಯತೀತ ನೆಲೆಯಲ್ಲಿ ಸಂಘಟಿಸಿ, ದೇಶದಲ್ಲಿ ಹಿಟ್ಲರ್‌ಶಾಹಿ ಆಡಳಿತ ಬೆಳೆಯದಂತೆ ನೋಡಿಕೊಳ್ಳುವ ಕಾಲ ಬಂದೊದಗಿದೆ.

ಈ ದೇಶದಲ್ಲಿ ಜನಿಸಿದ ಮತ್ತು ಈ ದೇಶದ ನಾಗರಿಕತ್ವ ಪಡೆದ ಪ್ರತಿಯೊಬ್ಬರಿಗೂ ಸಮಾನ ಹಕ್ಕಿದೆ ಎಂದು ನಮ್ಮ ಸಂವಿಧಾನ ಹೇಳುತ್ತದೆ. ಯಾವುದೇ ಒಂದು ಧರ್ಮದ ಜನರಿಗೆ ಈ ದೇಶ ಸೇರಿದ್ದಲ್ಲ ಎಂದು ಎಚ್ಚರಿಸುತ್ತದೆ.

### ಧರ್ಮ ಮತ್ತು ರಾಜಕಾರಣ

ನಮ್ಮ ದೇಶದ ಚರಿತ್ರೆ ವೈವಿಧ್ಯಮಯವಾಗಿದೆ. ಅದನ್ನು ತಿರುಚಲು ಬಿಡಬಾರದು. ಧರ್ಮ ಮತ್ತು ರಾಜಕಾರಣ ಒಂದಾಗಿದ್ದುದು ಭಾರತೀಯ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಬಹು ದೇವೋಪಾಸನೆಯ ಹಿಂದು ರಾಜರು ಮತ್ತು ಏಕ ದೇವೋಪಾಸನೆಯ ಮುಸ್ಲಿಂ ರಾಜರು ತಮ್ಮ ರಾಜಸತ್ತೆಗಾಗಿ ತಮ್ಮವರನ್ನು ಮತ್ತು ತಂದೆ ಮಕ್ಕಳು ಮೊದಲುಮಾಡಿ ತಮ್ಮ ರಕ್ತಸಂಬಂಧಿಕರನ್ನು ಕೊಂದ ಘಟನೆಗಳು ಇತಿಹಾಸದುದ್ದಕ್ಕೂ ಇವೆ. 'ಯುದ್ಧದಲ್ಲಿ ರಕ್ತವಿದೆ, ರಕ್ತಸಂಬಂಧವಿಲ್ಲ' ಎಂಬುದನ್ನು ತೋರಿಸಿಕೊಟ್ಟಿವೆ. ರಾಜಸತ್ತೆಯಲ್ಲಿ ಮತ್ತು ರಾಜಕಾರಣದಲ್ಲಿ ಎಲ್ಲ ಧರ್ಮಗಳು ನಗಣ್ಯವಾಗುತ್ತವೆ. ಆದರೆ ನಕಾರಾತ್ಮಕ ಬಳಕೆಗೆ ಸಂಬಂಧಿಸಿದಂತೆ ಧರ್ಮಗಳು ಪ್ರಾಮುಖ್ಯ ಪಡೆಯುತ್ತವೆ. ಆಗ ಧರ್ಮಗಳ ಭಾವನಾತ್ಮಕ ನೆಲೆಯಲ್ಲಿ ಭ್ರಮಾತ್ಮಕ ಕಲ್ಪನೆಗಳು ಮೂಡತೊಡಗುತ್ತವೆ.

ಧರ್ಮವು ವ್ಯಕ್ತಿಗೆ, ಕುಟುಂಬಕ್ಕೆ ಮತ್ತು ತಮ್ಮದೇ ಆದ ಧಾರ್ಮಿಕ ಸಮಾಜಕ್ಕೆ ಸೇರಿದ್ದಾಗಿತ್ತು. ಜನರು ಧರ್ಮವಂತರಾಗಿದ್ದರು ಆದರೆ ಧರ್ಮವಾದಿಗಳಾಗಿರಲಿಲ್ಲ. ಅವರು ತಮ್ಮ ಧರ್ಮವನ್ನು ತಮ್ಮ ವೈಯಕ್ತಿಕ ಬದುಕಿನಲ್ಲಿ ಆಚರಿಸುತ್ತಿದ್ದರು. 'ನಿಮ್ಮ ಧರ್ಮ ನಿಮಗೆ, ನಮ್ಮ ಧರ್ಮ ನಮಗೆ. ಆದರೆ ನಾವೆಲ್ಲ ಕೂಡಿ ಬದುಕುವ ನೆಲ ನಮ್ಮೆಲ್ಲರದು. ನಮ್ಮ ನೆಲಕ್ಕೆ; ಅಂದರೆ ಎಲ್ಲ ಜಾತಿ, ಧರ್ಮ ಮತ್ತು ವಿವಿಧ ಜನಾಂಗಗಳಿಂದ ಕೂಡಿದ ನಮ್ಮ ದೇಶಕ್ಕೆ ವಿಧೇಯರಾಗಿರಬೇಕು' ಎಂಬುದು ಜನಸಮುದಾಯಗಳ ಸ್ಥಾಯಿಭಾವವಾಗಿತ್ತು.

711ರಲ್ಲಿ ಮುಹಮ್ಮದ್ ಬಿನ್ ಕಾಸಿಂ ಎಂಬ ಅರೇಬಿಯಾದ ಉಮಯ್ಯದ್ ಖಲೀಫನ ಯುವ ಸೇನಾಪತಿ ಸಿಂಧ ಪ್ರಾಂತ್ಯದ ಮುಲ್ತಾನ ಮೇಲೆ ದಾಳಿ ಮಾಡಿದ. ಅಗ ಅಲ್ಲಿನ ಮುಖ್ಯ ದೇವಸ್ಥಾನದ ಅರ್ಚಕ ಮುಹಮ್ಮದ್ ಬಿನ್ ಕಾಸಿಂ ಬಳಿ ಬಂದು ಒಂದು ಗುಟ್ಟು ಹೇಳಿದ. ಅದೇನೆಂದರೆ ದೇವಸ್ಥಾನದ

ಶಿಖರದ ಮೇಲೆ ಹಾರಾಡುತ್ತಿರುವ ಧ್ವಜವನ್ನು ಬೀಳಿಸಿದರೆ ಸೈನಿಕರು ಗಾಬರಿಯಾಗಿ ಓಡಿಹೋಗುವವರು ಎಂದು ತಿಳಿಸಿದ. ಮುಹಮ್ಮದ್ ಬಿನ್ ಕಾಸಿಮನ ಸೈನಿಕರು ಬಾಣ ಬಿಟ್ಟು ಧ್ವಜವನ್ನು ಉರುಳಿಸಿದರು. ಬಹಳಷ್ಟು ಸೈನಿಕರು ಓಡಿ ಹೋದರು. ವಿಜಯಿಯಾದ ಮುಹಮ್ಮದ್ ಭಿನ್ ಕಾಸಿಂ ಆ ಮಂದಿರದಲ್ಲಿದ್ದ ಅಪಾರವಾದ ಸಂಪತ್ತನ್ನು ಲೂಟಿ ಮಾಡಿದ. ಈ ಲೂಟಿಯ ನಂತರ ತನಗೂ ಸ್ವಲ್ಪ ಭಾಗ ಸಿಗುವುದು ಎಂದು ಆ ಅರ್ಚಕ ಭಾವಿಸಿದ್ದ. ಆದರೆ ಆತ ಸ್ವಾರ್ಥಕ್ಕಾಗಿ ತನ್ನ ಜನರಿಗೆ ಮೋಸ ಮಾಡಿದ್ದು ಗೊತ್ತಾದಕೂಡಲೆ ಆತನ ಶಿರಚ್ಛೇದನಕ್ಕೆ ಮುಹಮ್ಮದ್ ಬಿನ್ ಕಾಸಿಂ ಆದೇಶಿಸಿದ. ಕೊನೆಗೆ ಆತ ಬ್ರಾಹ್ಮಣ ರಾಜ ದಹಿರನನ್ನು ಕೊಂದು ಸಿಂಧ ಪ್ರಾಂತ್ಯದ ರಾಜ್ಯಪಾಲನಾದ.

**ಘಜನಿ ಮತ್ತು ಘೋರಿ**

ಅಪಘಾನಿಸ್ತಾನದ ಘಜ್ನಿ ಮುಹಮ್ಮದ್ 1001ರಿಂದ 1027ರ ವರೆಗೆ 17 ಸಲ ದಾಳಿ ಮಾಡಿದ. ಆತ ದಾಳಿ ಮಾಡಲು ಬರುವ ಸಂದರ್ಭದಲ್ಲಿ ಮುಲ್ತಾನ ಪ್ರದೇಶದ ಮೇಲೆ ಹಾಯಬೇಕಿತ್ತು. ತನ್ನ ಪ್ರದೇಶದಲ್ಲಿ ಹಾಯಬಾರದು ಎಂದು ಮುಲ್ತಾನದ ಸುಲ್ತಾನ ಇಸ್ಮಾಯಿಲ್ ಹೇಳಿದ. ಆಗ ಘಜ್ನಿ ಸಿಟ್ಟಿಗೆದ್ದು; ಮುಲ್ತಾನ ಮೇಲೆ ದಾಳಿ ಮಾಡಲು ಆದೇಶಿಸಿದ. ಘಜ್ನಿ ಸೈನಿಕರು ಅಲ್ಲಿನ ಮುಖ್ಯ ಮಸೀದಿಯನ್ನೂ ಧ್ವಂಸ ಮಾಡಿದರು. ಯುದ್ಧದಲ್ಲಿ ಎಲ್ಲರೂ ಭಯಭೀತರೇ. ಯಾರಿಗೆ ಯಾರೂ ಇರುವುದಿಲ್ಲ. ಮುಂದೆ ಬಂದವರನ್ನು ಕೊಲ್ಲುವುದೇ ಯುದ್ಧಧರ್ಮ. ಅಲ್ಲಿ ಜಾತಿ, ಧರ್ಮ, ಬಂಧು ಬಳಗ ಎಂಬುದು ಕೂಡ ಇರುವುದಿಲ್ಲ. ಅದೊಂದು ಜೀವ ಉಳಿಸಿಕೊಳ್ಳುವ, ಕೊಲ್ಲುವ ಮತ್ತು ಗೆಲ್ಲುವ ಉನ್ಮಾದ. ಯುದ್ಧದಲ್ಲಿ ತೊಡಗಿದವರಿಗೆ ತಮ್ಮ ಮಂದಿರ ಮಸೀದಿಗಳು ಕೂಡ ಲೆಕ್ಕಕ್ಕೆ ಬರುವುದಿಲ್ಲ. ಅಲ್ಲಿ ತಮ್ಮ ಧರ್ಮಗಳ ಮೌಲ್ಯಗಳು ಕಾಲಕಸ ಆಗುತ್ತವೆ ಎಂಬ ಪರಿವೆಯಂತೂ ಮೊದಲೇ ಇರುವುದಿಲ್ಲ.

ಘಜನಿ ಮುಹಮ್ಮದ್ 17 ಸಲ ದಾಳಿ ಮಾಡಿದರೂ ತಡೆಯಲಿಕ್ಕಾಗಲಿಲ್ಲ. ಕಾರಣವೇನೆಂದರೆ ವಿವಿಧ ಜಾತಿ ಮತ್ತು ವರ್ಣಗಳಲ್ಲಿನ ಮೇಲು ಕೀಳಿನ ತಾರತಮ್ಯ, ವಿವಿಧ ರಾಜರುಗಳಲ್ಲಿ ದ್ವೇಷ ಸಾಧನೆ ಮತ್ತು ದಾಳಿಕೋರರ ಸೈನ್ಯದಲ್ಲಿ ಬಾಡಿಗೆ ಭಂಟರಾಗಿ ಸೇರುವವರಲ್ಲಿನ ಮನಸ್ಥಿತಿ!

1025ರಲ್ಲಿ ಘಜ್ನಿ 16ನೇ ಸಲ ದಾಳಿಗೆ ಬಂದಾಗ ಆತನ ಲಕ್ಷ್ಯ ಸೋಮನಾಥ ಮಂದಿರದ ಮೇಲೆ ಬಿತ್ತು. ಆತ ಸೋಮನಾಥ ಮಂದಿರ ಹಾಳುಗೆಡವಿ ಸಂಪತ್ತನ್ನೆಲ್ಲ ಲೂಟಿ ಮಾಡಿದ. ಇಂಥ ದಾಳಿಗಳಿಗೂ ಧರ್ಮಕ್ಕೂ ಯಾವುದೇ ಸಂಬಂಧವಿರಲಿಲ್ಲ. ದೇವಾಲಯಗಳು ಸಂಪತ್ತಿನ ತಾಣವಾಗಿರದಿದ್ದರೆ ಖಂಡಿತವಾಗಿಯೂ ಅವುಗಳ ಮೇಲೆ ದಾಳಿಗಳಾಗುತ್ತಿರಲಿಲ್ಲ.

11ನೇ ಶತಮಾನದ ಕಾಶ್ಮೀರ ರಾಜ ಹರ್ಷ (1089–1101) ತನ್ನ ರಾಜ್ಯದ ಭಂಡಾರ ಖಾಲಿಯಾದಾಗಲೆಲ್ಲ ಸಂಪತ್ತಿನಿಂದ ತುಂಬಿದ ಮಂದಿರಗಳ ಮೇಲೆ ದಾಳಿ

ಮಾಡುವುದಕ್ಕಾಗಿಯೆ 'ಮೂರ್ತಿ ಮೂಲೋತ್ಪಾಟನ ಸಚಿವ' ಹುದ್ದೆಯನ್ನು ಸೃಷ್ಟಿಸಿದ್ದ. ಬೆಳ್ಳಿ ಮತ್ತು ಬಂಗಾರದ ಮೂರ್ತಿಗಳನ್ನು ಕರಗಿಸಲು ಅದೇಶಿಸುತ್ತಿದ್ದ. ಕಲ್ಲಿನ ಮೂರ್ತಿಗಳಿದ್ದರೆ ರಸ್ತೆ ಬದಿ ಎಸೆಯುವ ಮೂಲಕ; ಜನರು ಆ ಮೂರ್ತಿಯ ಜೊತೆಗಿನ ಭಾವನಾತ್ಮಕ ಸಂಬಂಧಗಳನ್ನು ಕಳಚಿಕೊಳ್ಳುವಂತೆ ಮಾಡುತ್ತಿದ್ದ. ಹರ್ಷನ ಕಾಶ್ಮೀರ ರಾಜವಂಶದ ಇತಿಹಾಸವಾದ 'ರಾಜತರಂಗಿಣಿ'ಯಲ್ಲಿ ಇವನ್ನೆಲ್ಲ ಆಸ್ಥಾನ ಕವಿ ಕಲ್ಹಣ  ದಾಖಲಿಸಿದ್ದಾನೆ.

ರಾಜ ಹರ್ಷ ನಿಧನವಾಗಿ 90 ವರ್ಷಗಳ ನಂತರ ಮುಹಮ್ಮದ್ ಘೋರಿ ಅಫಘಾನಿಸ್ತಾನದಿಂದ ಬಂದು ಅನೇಕ ಕಡೆಗಳಲ್ಲಿ ದಾಳಿ ಮಾಡಿದ. 1191ರಲ್ಲಿ ಮೊದಲ ಸಲ ಪೃಥ್ವಿರಾಜ ಚೌಹಾಣ ರಾಜ್ಯದ ಮೇಲೆ ದಾಳಿ ಮಾಡಿದ. ದೆಹಲಿಗೆ 110 ಕಿಲೊಮೀಟರ್ ದೂರದ ತರೈನ್ ಪ್ರದೇಶದಲ್ಲಿ ನಡೆದ ಯುದ್ಧದಲ್ಲಿ ಗಾಯಗೊಂಡು ಸೋಲು ಅನುಭವಿಸಿದ. ನಂತರ 1192ರಲ್ಲಿ ಮತ್ತೆ ದಾಳಿ ಮಾಡಿದ. ಅದೇ ಪ್ರದೇಶದಲ್ಲಿ ನಡೆದ ಯುದ್ಧದಲ್ಲಿ ಪೃಥ್ವಿರಾಜ ಚೌಹಾಣನನ್ನು ಸೋಲಿಸಿ ಕೊಂದ. ಅದೇ ವರ್ಷ ದೆಹಲಿ ಮೇಲೆ ಹಿಡಿತ ಸಾಧಿಸಿದ.

ಪೃಥ್ವಿರಾಜ ಚೌಹಾಣಗೆ ಕನೌಜ (ಅಂತರ್ವೇದಿ ದೇಶ) ರಾಜ ಜಯಚಂದ್ರ ರಾಥೋಡ ಸಹಾಯ ಮಾಡಿದ್ದರೆ ಘೋರಿ ಗೆಲ್ಲುವ ಸಾಧ್ಯತೆ ಇರಲಿಲ್ಲ. ಆದರೆ ಆತ ಘೋರಿ ಜೊತೆ ಶಾಮೀಲಾಗಿ ಪೃಥ್ವಿರಾಜನ ಸಾವಿಗೆ ಖುಷಿಪಟ್ಟ. ಮಗಳು ಸಂಯುಕ್ತಾ ತನ್ನ ಇಚ್ಛೆಗೆ ವಿರುದ್ಧವಾಗಿ ಪೃಥ್ವಿರಾಜನನ್ನು ಪ್ರೀತಿಸುತ್ತಿದ್ದಳು ಎಂಬುದೇ ಈ ದ್ವೇಷಕ್ಕೆ ಕಾರಣ ಎನ್ನಲಾಗಿದೆ.

ನಂತರ 1194ರಲ್ಲಿ ಘೋರಿ ಮತ್ತೆ ಬಂದು ಕನೌಜ ಮೇಲೆ ದಾಳಿ ಮಾಡಿ ಚಂದಾವರ ಯುದ್ಧಭೂಮಿಯಲ್ಲಿ ಜಯಚಂದ್ರನ ಸೋಲಿಸಿ ಹತ್ಯೆಗೈದ. ದೆಹಲಿಯನ್ನು ರಾಜಧಾನಿ ಮಾಡಿಕೊಂಡು ತನ್ನ ನೆಚ್ಚಿನ ಗುಲಾಮನೂ ವೀರ ಸೇನಾನಿಯೂ ಆಗಿದ್ದ ಕುತ್ಬುದ್ದೀನ್ ಐಬಕನನ್ನು ತನ್ನ ಪ್ರತಿನಿಧಿಯಾಗಿ ದೆಹಲಿಯಲ್ಲಿ ಇರಿಸಿದ. ಇನ್ನೊಬ್ಬ ಗುಲಾಮ ವೀರನಾಗಿದ್ದ ಬಖ್ತಿಯಾರ್ ಖಿಲ್ಜಿ 1197ರಿಂದ ಬಂಗಾಲದಲ್ಲಿ ಘೋರಿ ಪರ ದಾಳಿಯಲ್ಲಿ ತೊಡಗಿದ್ದ. 1202ರಲ್ಲಿ ಘೋರಿ ದೆಹಲಿ ಸಿಂಹಾಸನವೇರಿದ ನಂತರ 1203ರಲ್ಲಿ ಬಂಗಾಲದ ಆಡಳಿತ ನೋಡಿಕೊಳ್ಳಲು ಬಖ್ತಿಯಾರನ್ನು ನೇಮಿಸಿದ. 1205ದಲ್ಲಿ ಖೋಖಾರ ರಾಜ್ಯದ ಮೇಲೆ ಮುಹಮ್ಮದ್ ಘೋರಿ ವಿಜಯ ಸಾಧಿಸಿದ. ಒಗ್ಗಟ್ಟಿಲ್ಲದ ರಾಜರು ಹೀಗೆ ದಾಳಿಕೋರರಿಗೆ ಗುರಿಯಾದರು.

**ಗುಲಾಮ ರಾಜವಂಶ**

1206ರಲ್ಲಿ ಮುಹಮ್ಮದ್ ಘೋರಿ ಅಫಘಾನಿಸ್ತಾನದಲ್ಲಿನ ತನ್ನ ಮೂಲ ರಾಜಧಾನಿಯಾದ ಘೋರ್‌ಗೆ ಹೋಗುವಾಗ ಮಧ್ಯದಲ್ಲಿ ನಮಾಜ್ ಮಾಡುವ ವೇಳೆ ಅಪರಚಿತ ದಾಳಿಕೋರರಿಂದ ಕೊಲೆಗೀಡಾದ.

ಗುಲಾಮ ಸೇನಾನಿ ಕುತುಬುದ್ದೀನ್ ಐಬಕ್ (1206–1210) ದೆಹಲಿಯ ಸುಲ್ತಾನನಾದ. ಅದೇ ವರ್ಷ ಅಂದರೆ 1206ರಲ್ಲಿ ಬಖ್ತಿಯಾರ್ ಖಿಲ್ಜಿ ಟಿಬೆಟ್‌ನಿಂದ ಬಂಗಾಲ್‌ಗೆ ವಾಪಸಾಗುವಾಗ; ಆತನ ಉಪ ನಾಯಕನಾಗಿದ್ದ ಅಲಿ ಮರ್ದಾನ ಖಿಲ್ಜಿಯಿಂದ ಕೊಲೆಗೀಡಾದ.

ಬೌದ್ಧರ ನಲಂದಾ ವಿಶ್ವವಿದ್ಯಾಲಯವನ್ನು ಬಖ್ತಿಯಾರ್ ಖಿಲ್ಜಿ ಸುಟ್ಟು ಧ್ವಂಸ ಮಾಡಿದ ಎಂಬ ಅಪಾವಾದಕ್ಕೆ ಈಡಾಗಿದ್ದನ್ನು ಖ್ಯಾತ ಇತಿಹಾಸಕಾರ ದ್ವಿಜೇಂದ್ರ ನಾರಾಯಣ ಝಾ ಅಲ್ಲಗಳೆದಿದ್ದಾರೆ. ಕ್ರಿಸ್ತ ಪೂರ್ವ 2ನೇ ಶತಮಾನದಲ್ಲಿ ಯೋಗಸೂತ್ರ ಬರೆದ ಪತಂಜಲಿ ಮಹರ್ಷಿ; ಮಹಾಭಾಷ್ಯ ಎಂಬ ಗ್ರಂಥವನ್ನೂ ಬರೆದಿದ್ದಾನೆ. ವೈಯಾಕರಣಿ ಪಾಣಿನಿಯ ಅಷ್ಟಾಧ್ಯಾಯಿ ವ್ಯಾಕರಣ ಗ್ರಂಥಕ್ಕೆ ಬರೆದ ಭಾಷ್ಯ ಅದಾಗಿದೆ. ಆ ಕೃತಿಯಲ್ಲಿ ಆತ ಬ್ರಾಹ್ಮಣರ ಮತ್ತು ಬೌದ್ಧರ ಸಂಘರ್ಷದ ಕುರಿತು ತಿಳಿಸಿದ್ದಾನೆ. ಮೌರ್ಯರ ನಂತರ ಬಂದ ಬ್ರಾಹ್ಮಣ ರಾಜ ಪುಷ್ಯಮಿತ್ರ ಶುಂಗ್ ಸಾವಿರಾರು ಬೌದ್ಧ ವಿಹಾರಗಳನ್ನು ಮತ್ತು ಸ್ತೂಪಗಳನ್ನು ಹಾಳುಗೆಡವಿ ಬೌದ್ಧ ಭಿಕುಗಳ ಕೊಲೆಗೈದಿದ್ದಾನೆ. 7ನೇ ಶತಮಾನದಲ್ಲಿ ಚೀನದಿಂದ ಭಾರತಕ್ಕೆ ಬಂದ ಬೌದ್ಧ ಸನ್ಯಾಸಿ ಹುಯೆನ್ ತ್ಸಾಂಗ್ 15 ವರ್ಷಗಳ ವರೆಗೆ ಇದ್ದ. ಆತ 5 ವರ್ಷಗಳನ್ನು ನಲಂದಾ ವಿಶ್ವವಿದ್ಯಾಲಯದಲ್ಲಿ ಕಳೆದಿದ್ದಾನೆ. 'ಶಶಾಂಕ ಎಂಬ ದೊರೆ ಬೋಧ ಗಯಾದಲ್ಲಿನ ಬೋಧಿವೃಕ್ಷವನ್ನು ಕಡಿದು ಹಾಕಿದ' ಎಂದು ಆತ ತಿಳಿಸಿದ್ದಾನೆ. ಅದೇ ವೃಕ್ಷದ ಕೆಳಗೆ ಬುದ್ಧನಿಗೆ ವೈಶಾಖ ಪೂರ್ಣಿಮೆಯಂದು ಜ್ಞಾನೋದಯವಾಗಿತ್ತು. ಇಂಥ ಅನೇಕ ಉದಾಹರಣೆಗಳನ್ನು ಕೊಟ್ಟ ಝಾ ಅವರು, ನಲಂದಾ ಬೌದ್ಧ ವಿಶ್ವವಿದ್ಯಾಲಯವನ್ನು ಬ್ರಾಹ್ಮಣರೇ ಸುಟ್ಟು ಹಾಕಿದ್ದು ಎಂದು ವಾದಿಸಿದ್ದಾರೆ. ಬಖ್ತಿಯಾರ ಖಿಲ್ಜಿ ನಲಂದಾಕ್ಕೆ ಹೋದ ಯಾವ ದಾಖಲೆಗಳು ಇಲ್ಲ ಎಂದೂ ತಿಳಿಸಿದ್ದಾರೆ.

ಇನ್ನು ದೆಹಲಿಯಲ್ಲಿ 1210ರಲ್ಲಿ ಐಬಕ್ ಕುದುರೆ ಸವಾರಿ ಮಾಡುತ್ತ ಆಟ ಆಡುವ ವೇಳೆ ಬಿದ್ದು ನಿಧನನಾದ. ಆತನ ಮಗ ಆರಂ ಶಹಾ ಪಟ್ಟಕ್ಕೆ ಬಂದರೂ ಆತ ದುರ್ಬಲನಾಗಿದ್ದ ಕಾರಣ ಕುಲೀನರ ಒಂದು ಗುಂಪು ಅವನನ್ನು ಇಳಿಸಿ ಐಬಕ್‌ನ ಅಳಿಯ ಶಮ್ಸುದ್ದೀನ್ ಇಲ್ತುತ್‌ಮಿಶ್ (1211–1236)ನನ್ನು ಸುಲ್ತಾನನನ್ನಾಗಿಸಿತು. ಆತನ ನಂತರ ಮಗ ರುಕ್ನುನಿದ್ದೀನ್ ಫಿರೋಜ್ ಗದ್ದಿಗೆ ಮೇಲೆ ಕುಳಿತ. ಆದರೆ 6 ತಿಂಗಳೊಳಗೇ ಆತನ ಕೊಲೆಯಾಯಿತು. ನಂತರ ಆತನ ಸಹೋದರಿ ರಜಿಯಾ ಸುಲ್ತಾನ್ (1236–1240) ಪಟ್ಟಕ್ಕೆ ಬಂದಳು. ನಾಲ್ಕು ವರ್ಷ ಕಳೆಯುವುದರೊಳಗಾಗಿ ಆಕೆಯ ಸಹೋದರ ಮುಯಿಜುದ್ದೀನ್ ಬಹರಂ ಶಹಾ (1240–1242) ಮೋಸದಿಂದ ಸೈನ್ಯ ಬಳಸಿ ಅವಳ ಕೊಲೆ ಮಾಡಿದ. ಆತ ದುರ್ಬಲ ರಾಜನಾಗಿದ್ದ. ಮಂಗೋಲರ ದಾಳಿಯನ್ನು ತಡೆಗಟ್ಟಲಿಕ್ಕಾಗದೆ ರಾಜ್ಯದ ಪ್ರಜೆಗಳು ಹಿಂಸೆಗೊಳಗಾಗಬೇಕಾಯಿತು. ಈ ಕಾರಣಗಳಿಂದಾಗಿ ಆತನ ಹತ್ಯೆಯಾಯಿತು. ನಂತರ ಆತನ ಸಹೋದರ ರುಕ್ನುದ್ದೀನ್ ಫಿರೋಜ್ ಶಹಾನ ಮಗ ಅಲ್ಲಾವುದ್ದೀನ್ ಮಸೂದ್ ಶಹಾನನ್ನು (1242–1246) ದೆಹಲಿ ಸಿಂಹಾಸನದ ಮೇಲೆ

ಕೂಡಿಸಲಾಯಿತು. ಆತ ವಿಷಯಲಂಪಟನೂ ಕ್ರೂರಿಯೂ ಆಗಿ ಕುಲೀನರ ಕೆಂಗಣ್ಣಿಗೆ ಗುರಿಯಾದ. ಆತನನ್ನು ಪದಚ್ಯುತಗೊಳಿಸಿ ಜೈಲಿಗಟ್ಟಿ ಕೊಲ್ಲಲಾಯಿತು. ಅವನ ಸ್ಥಾನಕ್ಕೆ ಶಮ್ಸುದ್ದೀನ್ ಇಲ್ತುತ್‌ಮಿಶ್ ಮಗ ಹಾಗೂ ಘಿಯಾಸುದ್ದೀನ ಬಲ್ಬನ್‌ನ ಅಳಿಯ ನಾಸಿರುದ್ದೀನ್ ಮಹಮೂದನನ್ನು (1246–1266) ತರಲಾಯಿತು. ನಾಸೀರುದ್ದೀನ್ ಧಾರ್ಮಿಕ ವ್ಯಕ್ತಿಯಾಗಿದ್ದು ಸರಳ ಜೀವನ ನಡೆಸುತ್ತಿದ್ದ. ನಮಾಜ ಮತ್ತು ಪವಿತ್ರ ಕುರಾನಿನ ಪ್ರತಿ ಮಾಡುವುದರಲ್ಲಿ ಹೆಚ್ಚಿನ ಸಮಯ ಕಳೆಯುತ್ತಿದ್ದ. ಮಹತ್ವಾಕಾಂಕ್ಷಿಯಾದ ಆತನ ಮಾವ ಘಿಯಾಸುದ್ದೀನ್ ಬಲ್ಬನ್ ರಾಜ್ಯದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ. ಆದರೆ ನಾಸೀರುದ್ದೀನ್ ರಾಜತಂತ್ರ ನಿಪುಣನಾಗಿದ್ದರಿಂದಲೆ ಪ್ರತಿಕೂಲ ಪರಿಸ್ಥಿತಿಯನ್ನು ನಿಭಾಯಿಸಲು ಸಾಧ್ಯವಾಯಿತು ಎಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಆತ ಮಂಗೋಲರ ದಾಳಿಗಳನ್ನು ಹಿಮ್ಮೆಟ್ಟಿಸಿದ ಮತ್ತು ಬಲ್ಬನ್‌ನ ತಮ್ಮ ಕಿಶ್ಲುಖಾನನ ಒಳ ಬಂಡಾಯವನ್ನು ಸದೆಬಡಿದು ಜನಪ್ರಿಯನಾದ.

ನಾಸೀರುದ್ದೀನ್ ಮಹಮೂದನ ಅಂತ್ಯ ನಿಗೂಢವಾಗಿದೆ. ಆತನನ್ನೂ ಆತನ ಸಹೋದರರನ್ನೂ ಬಲ್ಬನ್ ವಿಷ ಹಾಕಿ ಕೊಂದ ಎಂದು ಅನೇಕ ಇತಿಹಾಸಕಾರರು ತರ್ಕಿಸಿದ್ದಾರೆ.

ಘಿಯಾಸುದ್ದೀನ್ ಬಲ್ಬನ್ (1266–1287) ಗುಲಾಮ ರಾಜವಂಶದ 9ನೇ ಸುಲ್ತಾನ ಆಗಿ ದೆಹಲಿ ಆಳಿದ. ಆತನ ಆಳ್ವಿಕೆಯಲ್ಲಿ ಕುಲೀನರೂ ಭಯಭೀತರಾಗಿದ್ದರು. ಆತನ ಮಗ ಮುಹಮ್ಮದ್ ಖಾನ್ 1285ರಲ್ಲಿ ಮಂಗೋಲರ ವಿರುದ್ಧ ನಡೆದ ಯುದ್ಧದಲ್ಲಿ ಹತನಾದ. ಮುಹಮ್ಮದ್ ಖಾನ್ ಮಗ ಖೈಖಾಸರೌನನ್ನು ಗದ್ದಿಗೆಯ ಮೇಲೆ ಕೂಡಿಸುವ ಬಯಕೆ ಬಲ್ಬನ್‌ಗೆ ಇತ್ತು. ಆದರೆ ಬಲ್ಬನ್ ಸಾವಿನ ನಂತರ ಕುಲೀನರು ಬಲ್ಬನ್‌ನ ಕಿರಿಯ ಮಗ ಬುಘ್ರಾಖಾನನ ಮಗನಾದ ಮುಯಿಜುದ್ದೀನ್ ಖೈಖುಬಾದ್ (1287–1290)ನನ್ನು ಗುಲಾಮ ರಾಜವಂಶದ 10 ನೇ ಸುಲ್ತಾನ ಮಾಡಿದರು. ಆತ ಅಸಮರ್ಥನಾಗಿದ್ದ. ಆರೋಗ್ಯ ಹದಗೆಟ್ಟಿದ ಮೇಲೆ ತನ್ನ ಮೂರು ವರ್ಷದ ಮಗ ಶಮ್ಸುದ್ದೀನನನ್ನು ಗದ್ದಿಗೆ ಮೇಲೆ ಕೂಡಿಸಿದ. ಆಗ ರಕ್ಷಕನಾಗಿ ರಾಜ್ಯದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಜಲಾಲುದ್ದೀನ್ ಫಿರೋಜ್ ಖಿಲ್ಜಿ (1290–1296) ತಾನೇ ದೆಹಲಿ ಸುಲ್ತಾನ ಎಂದು ಘೋಷಿಸಿದ. ಹೀಗೆ ಈ ಗುಲಾಮ ರಾಜವಂಶ 1290ರಲ್ಲಿ ಅಂತ್ಯ ಕಂಡಿತು. ಖಿಲ್ಜಿ ರಾಜವಂಶದ ಅಧೀನದಲ್ಲಿ ದೆಹಲಿ ಗದ್ದಿಗೆ ಬಂದಿತು.

### ಖಿಲ್ಜಿ ರಾಜವಂಶ

ಖಿಲ್ಜಿ ರಾಜವಂಶ 1290ರಿಂದ 1320ರ ವರೆಗೆ ದೆಹಲಿ ಆಳಿತು. ಜಲಾಲುದ್ದೀನ್ ಫಿರೋಜ್ ಖಿಲ್ಜಿ ಇದರ ಸ್ಥಾಪಕ. ಇವನ ನಂತರ ಅಳಿಯ ಹಾಗೂ ಅಣ್ಣನ ಮಗ ಅಲ್ಲಾವುದ್ದೀನ್ ಖಿಲ್ಜಿ (1296–1316) ತನ್ನ ಮಾವ ಜಲಾಲುದ್ದೀನನ್ನು

1296ರಲ್ಲಿ ಕೊಂದು ದೆಹಲಿ ಸುಲ್ತಾನನಾದ. ಆತ ಗುಲಾಮನಾಗಿ ಪಡೆದುಕೊಂಡಿದ್ದ ಮಲಿಕ್ ಕಾಫುರ್ ಹಿಂದೂ ಧರ್ಮದಿಂದ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡವನಾಗಿದ್ದ. ಆತ ತನ್ನ ಸುಲ್ತಾನನಿಗ ನಿಷ್ಠೆ ತೋರಿಸುತ್ತ ಆತನ ಸೇನಾಪತಿಯಾಗಿ ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದ. 1308ರಿಂದ 1311 ಅನೇಕ ಸಲ ದಾಳಿ ಮಾಡಿ ವಿವಿಧ ರಾಜ್ಯಗಳಲ್ಲಿನ ಸಂಪತ್ತನ್ನು ಸೂರೆಗೊಂಡ. ನಪುಂಸಕ ಮಲಿಕ್ ಕಾಫುರ್ ಅತಿಸುಂದರನೂ ಶೂರನೂ ಆಗಿದ್ದ. ಅಲಾವುದ್ದೀನ್ ಜೊತೆ ಆತನದು ಸಲಿಂಗರತಿ ಸಂಪರ್ಕವಿತ್ತು. ಹೀಗಾಗಿ ಅಲಾವುದ್ದೀನ್ ಆತ ಹೇಳಿದ ಹಾಗೆ ಕೇಳುತ್ತಿದ್ದ.

ಅಲ್ಲಾವುದ್ದೀನ್ 1303ರಲ್ಲಿ ಚಿತ್ತೋಡಗಢ ಮೇಲೆ ದಾಳಿ ಮಾಡಿದ. 'ಅಲ್ಲಿನ ರಾಜಾ ರತನಸಿಂಗನ ರಾಣಿ ಪದ್ಮಾವತಿ ಸುರಸುಂದರಿ ಎಂದು ಅಲ್ಲಾವುದ್ದೀನನಿಗೆ ಹೇಳಿಕೊಟ್ಟವ ರಾಘವ ಎಂಬಾತ. ಪದ್ಮಾವತಿಯನ್ನು ಪಡೆಯಲು ಅಲ್ಲಾವುದ್ದೀನ್ ಚಿತ್ತೋರಗಢದ ಮೇಲೆ ದಾಳಿ ಮಾಡಿದ' ಎಂದು ಮಲೀಕ್ ಮೊಹಮ್ಮದ್ ಜೈಸಿ "ಪದ್ಮಾವತ್" ಹೆಸರಿನ ಮಹಾಕಾವ್ಯದಲ್ಲಿ ತಿಳಿಸಿದ್ದಾನೆ. (ಆದರೆ ಬಹಳಷ್ಟು ಇತಿಹಾಸಕಾರರು ಇದನ್ನು ಅಲ್ಲಗಳೆದಿದ್ದಾರೆ. ಈ ಮಹಾಕಾವ್ಯದ ಹೊರತಾಗಿ ಈ ವಿಷಯದ ದಾಖಲೆ ಬೇರೆ ಎಲ್ಲಿಯೂ ಇಲ್ಲ.) 1316ನೇ ಜನವರಿ 4ರಂದು ಅಲ್ಲಾವುದ್ದೀನ್ ಸಾವು ನಿಗೂಢ ರೀತಿಯಲ್ಲಿ ಸಂಭವಿಸಿತು. ಮಲಿಕ್ ಕಾಫುರ್ ಮದ್ಯದಲ್ಲಿ ವಿಷ ಬೆರೆಸಿ ಅಲ್ಲಾವುದ್ದೀನ್ ಖಿಲ್ಜಿಯನ್ನು ಕೊಂದ ಎಂದು ಅನೇಕ ಇತಿಹಾಸಕಾರರು ತರ್ಕಿಸಿದ್ದಾರೆ.

ಕೊನೆಯ ದಿನಗಳಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಜೀವನ್ಮೃತನಂತೆ ಆಗಿದ್ದ. ಹೀಗೆ ಆತ ಸಾಯುವ ಮೊದಲೇ ಆತನ ಹಿರಿಯ ಮಗ ಕುತ್ಬುದ್ದೀನ್ ಮುಬಾರಕ್ ಖಾನ್‌ಗೆ ಮಲಿಕ್ ಕಾಫುರ್ ಗ್ವಾಲಿಯರ್ ಜೈಲಿನಲ್ಲಿಟ್ಟ. ಅಲ್ಲಾವುದ್ದೀನನ 6 ವರ್ಷದ ಮಗ ಶಿಹಾಬುದ್ದೀನ ಉಮರನನ್ನು ಪಟ್ಟಕ್ಕೆ ತಂದ. ಶಿಹಾಬುದ್ದೀನನ ಹಿಂದೂ ತಾಯಿ ಝಾತ್ಯಪಾಲಿ. ಆಕೆ ಖಿಲ್ಜಿಗಳ ದೇವಗಿರಿಯ ಸಾಮಂತ ರಾಮಚಂದ್ರನ ಮಗಳು. (ಜಲಾಲುದ್ದೀನ ಖಿಲ್ಜಿಯ ಮಗಳು ಮೆಹರುನ್ನೀಸಾ, ಮಹ್ರು, ಕಮಲಾದೇವಿ, ಝಾತ್ಯಪಾಲಿ ಮುಂತಾದವರು ಅಲ್ಲಾವುದ್ದೀನ ಖಿಲ್ಜಿಯ ಪತ್ನಿಯರು.)

ಬಾಲಕ ಶಿಹಾಬುದ್ದೀನ್ ಸುಲ್ತಾನನಾದರೂ ಆಡಳಿತವೆಲ್ಲ ಮಲಿಕ್ ಕಾಫುರ್ ಕೈಯಲ್ಲಿತ್ತು. ಏತನ್ಮಧ್ಯೆ ಮಲಿಕ್ ಕಾಫುರನ ಕೊಲೆಯಾಯಿತು. ನಂತರ ಶಿಹಾಬುದ್ದೀನ್ ಸಹೋದರ ಕುತ್ಬುದ್ದೀನ್ ಮುಬಾರಕ್ ಖಿಲ್ಜಿ (ಖಾನ್) (1316–1320) ಉಸ್ತುವಾರಿ ನೋಡಿಕೊಳ್ಳತೊಡಗಿದ. ಸ್ವಲ್ಪ ದಿನಗಳಲ್ಲೇ ಆತನನ್ನು ಸಿಂಹಾಸನದಿಂದ ಇಳಿಸಿ ತಾನೇ ಸುಲ್ತಾನನಾದ. ತನ್ನ ತಂದೆ ಅಲ್ಲಾವುದ್ದೀನ್ ಖಿಲ್ಜಿ ಕಾಲದಲ್ಲಿ ಜೈಲು ಸೇರಿದ್ದ ಸಹಸ್ರಾರು ಜನರನ್ನು ಬಿಡುಗಡೆಗೊಳಿಸಿದ. ಭಾರಿ ಕರವನ್ನು ಇಳಿಸಿ ಪ್ರಜೆಗಳಿಗೆ ಅನುಕೂಲ ಕಲ್ಪಿಸಿದ. ಬಾಲಕ ಶಿಹಾಬುದ್ದೀನ್ ಅದೇ ವರ್ಷ, ಅಂದರೆ

1316ರಲ್ಲಿ ನಿಧನನಾದ. ನಂತರ 1320ರಲ್ಲಿ ತನ್ನ ಸೇನಾಪತಿ ಖುಸ್ರೂ ಖಾನ್ ಪಿತೂರಿಯಿಂದಾಗಿ ಕುತ್ಬುದ್ದೀನ್ ಮುಬಾರಕ ಖಿಲ್ಜಿ ಕೊಲೆಗೀಡಾದ.

ಹಿಂದೂ ಧರ್ಮದಿಂದ ಮತಾಂತರಗೊಂಡಿದ್ದ ಖುಸ್ರೂ ಖಾನ್; ಅಲ್ಲಾವುದ್ದೀನ್ ಖಿಲ್ಜಿಯ ಸಂಬಂಧಿಕನೂ ಆಗಿದ್ದ. ಆತ ಸುಲ್ತಾನನಾದ ನಂತರ ಅಲ್ಲಾವುದ್ದೀನ್ ಖಿಲ್ಜಿಯ ಇಡೀ ಕುಟುಂಬದ ಹತ್ಯೆ ಮಾಡಿದ. ಆಗ ಪಂಜಾಬದ ರಾಜ್ಯಪಾಲ ಆಗಿದ್ದ ಘಿಯಾಸುದ್ದೀನ್ ತುಘಲಕ್ ತನ್ನ ಪಡೆಯೊಂದಿಗೆ ಬಂದು ಖುಸ್ರೋ ಖಾನನ ಕೊಲೆ ಮಾಡಿ ಅಧಿಕಾರ ವಹಿಸಿಕೊಂಡ. ಖುಸ್ರೂ ಖಾನನ ಆಡಳಿತಾವಧಿ ಕೇವಲ ಮೂರು ತಿಂಗಳು. ಆದರೆ ಆತ ಖಿಲ್ಜಿ ರಾಜವಂಶದ ಕೊನೆಯ ಸುಲ್ತಾನ ಎನಿಸಿದ.

**ತುಘಲಕ್ ರಾಜವಂಶ**

1320ರಿಂದ 1413ರ ವರೆಗೆ ತುಘಲಕ್ ರಾಜವಂಶ ಆಳ್ವಿಕೆ ನಡೆಯಿತು. ಘಿಯಾಸುದ್ದೀನ ತುಘಲಕ್ ಇದರ ಸ್ಥಾಪನಾದ. ಈತ ಮಂಗೋಲ ದಾಳಿಕೋರರರನ್ನು ಸದೆಬಡಿದ. 1325ರಲ್ಲಿ ಬಂಗಾಲದ ಮೇಲೆ ವಿಜಯ ಸಾಧಿಸಿ ಮರಳುವಾಗ ಅವನ ಸ್ವಾಗತಕ್ಕಾಗಿ ರಚಿಸಿದ ಮಂಟಪ ಬಿದ್ದು ಅಕಾಲ ಮರಣಕ್ಕೆ ತುತ್ತಾದ. ಇದು ಮಗನ ಷಡ್ಯಂತ್ರ ಎಂದು ಕೆಲ ಇತಿಹಾಸಕಾರರ ಸಂಶಯ ವ್ಯಕ್ತ ಪಡಿಸಿದ್ದಾರೆ. ನಂತರ ಮಗ ಮುಹಮ್ಮದ್ ಬಿನ್ ತುಘಲಕ್ ಸಿಂಹಾಸನವೇರಿದ. 1327ರಲ್ಲಿ ದೆಹಲಿಯಿಂದ ದೌಲತಾಬಾದ(ದೇವಗಿರಿ)ಗೆ ರಾಜಧಾನಿಯನ್ನು ಸ್ಥಳಾಂತರಿಸಿದ. ಮತ್ತೆ ಮರಳಿ ದೆಹಲಿಯನ್ನು ರಾಜಧಾನಿ ಮಾಡಿಕೊಂಡ. ತಾಮ್ರ ಮತ್ತು ಹಿತ್ತಾಳೆಯ ನಾಣ್ಯಗಳನ್ನು ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳಿಗೆ ಸಮನಾಗಿ ಚಲಾವಣೆಗೆ ತಂದ. ಆಗ ಅನೇಕರು ಖೋಟಾ ನಾಣ್ಯಗಳನ್ನು ಸೃಷ್ಟಿಸುವ ಮೂಲಕ ಆರ್ಥಿಕ ವ್ಯವಸ್ಥೆಯನ್ನು ಹದಗೆಡಿಸಿದರು. ಇಂಥ ಹುಚ್ಚು ನಿರ್ಧಾರಗಳಿಂದ ಪ್ರಜೆಗಳು ಬಹಳ ಕಷ್ಟನಷ್ಟ ಅನುಭವಿಸಬೇಕಾಯಿತು.

1351ರಲ್ಲಿ ಮುಹಮ್ಮದ್ ತುಘಲಕ್ ನಿಧನದ ನಂತರ ಆತನ ಸೋದರ ಸಂಬಂಧಿ ಫಿರೋಜ್ ಶಹಾ ತುಘಲಕ್ ಪಟ್ಟಕ್ಕೆ ಬಂದು 1388ರ ವರೆಗೆ ಆಳಿದ. ಈತ ಮುಸ್ಲಿಮೇತರರ ಮೇಲೆ ಜಿಝಿಯಾ ಕರ ಹೇರಿದ. ಇವನ ಆಳ್ವಿಕೆಯಲ್ಲಿ ರಾಜಮನೆತನದಲ್ಲಿ ಎರಡು ಗುಂಪುಗಳಾಗಿ ಯಾದವೀ ಕಲಹ ಶುರುವಾಯಿತು. 1398ರಲ್ಲಿ ಸಮರಕಂದದ ತೈಮೂರಲಂಗ ದೆಹಲಿ ಮೇಲೆ ದಾಳಿ ಮಾಡಿ ಸಂಪತ್ತನ್ನು ದೋಚಿದ. ಖಿಜ್ರಖಾನನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿ ಸಮರಕಂದಗೆ ವಾಪಸಾದ.

ತೈಮೂರಲಂಗನ ದೆಹಲಿ ಪ್ರತಿನಿಧಿಯಾಗುವ ಮೊದಲು ಫಿರೋಜ್ ಶಹಾ ತುಘಲಕ್ ಆಳ್ವಿಕೆಯಲ್ಲಿ ಸಯ್ಯಿದ್ ಖಿಜ್ರ ಖಾನ್ ಮುಲ್ತಾನ ಪ್ರದೇಶದ ರಾಜ್ಯಪಾಲ ಆಗಿದ್ದ. ಆತ 1414ರಲ್ಲಿ ದೆಹಲಿ ಮೇಲೆ ದಾಳಿ ಮಾಡಿ ನಾಸೀರುದ್ದೀನ್ ಮಹಮೂದ್

ಶಾಹ ತುಘಲಕ್ ಮೇಲೆ ವಿಜಯ ಸಾಧಿಸಿದ ನಂತರ ತುಘಲಕ್ ರಾಜವಂಶದ ಆಳ್ವಿಕೆಗೆ ತೆರೆ ಬಿತ್ತು.

**ಸಯ್ಯೀದ್ ರಾಜವಂಶ**

ಸಯ್ಯೀದ್ ಖಿಜ್ರ ಖಾನ್ ಮೂಲಕ ಸಯ್ಯೀದ್ ರಾಜವಂಶದ ಆಳ್ವಿಕೆ ಪ್ರಾರಂಭವಾಯಿತು. 1421ರಲ್ಲಿ ಖಿಜ್ರ ಖಾನ್ ಮರಣಾನಂತರ ಆತನ ಮಗ ಸಯ್ಯೀದ್ ಮುಬಾರಕ್ ಶಹಾ (1421–1434) ದೆಹಲಿ ಸುಲ್ತಾನನಾದ. ಆತನ ಕುಲೀನರು ನಿರಂತರವಾಗಿ ಆತನಿಗೆ ಜೀವ ಬೆದರಿಕೆ ಹಾಕತೊಡಗಿದರು. ಕೊನೆಗೆ ಕೊಲೆ ಮಾಡಿದರು. ನಂತರ ಆತನ ಸೋದರಳಿಯ ಮುಹಮ್ಮದ ಶಹಾ (1434–1443) ಸುಲ್ತಾನನಾದ. ತದನಂತರ ಆತನ ಮಗ ಅಲಾವುದ್ದೀನ್ ಆಲಂ ಶಹಾ (1443–1451) ಸಯ್ಯೀದ್ ರಾಜವಂಶದ ಕೊನೆಯ ಸುಲ್ತಾನನಾದ.

**ಲೋದಿ ರಾಜವಂಶ**

1451ರಿಂದ 1526ರ ವರೆಗೆ ಲೋದಿ ರಾಜವಂಶ ದೆಹಲಿಯನ್ನು ಆಳಿತು. ಸಯ್ಯೀದ್ ರಾಜವಂಶದ ಅಲಾವುದ್ದೀನ್ ಆಲಂ ಶಹಾನನ್ನು ಸೋಲಿಸಿದ ಬಹಲುಲ್ ಖಾನ್ ಲೋದಿ (1451–1489) ವಂಶದ ಮೊದಲ ಸುಲ್ತಾನನಾದ. ತದನಂತರ ಅವನ ಮಗ ಸಿಕಂದರ್ ಲೋದಿ (1489–1517) ಕೊನೆಯದಾಗಿ ಸಿಕಂದರ್ ಮಗ ಇಬ್ರಾಹಿಂ ಲೋದಿ (1517–1526) ರಾಜ್ಯವಾಳಿದರು. ಲೋದಿ ರಾಜವಂಶದ ಆಳ್ವಿಕೆ ನಂತರ ಮೊಘಲರ ಆಳ್ವಿಕೆ ಶುರುವಾಯಿತು.

**ಮೊಘಲ ರಾಜವಂಶ**

16ನೇ ಶತಮಾನದಲ್ಲಿ (1526–1530) ಬಾಬರ್ ದೆಹಲಿಯಲ್ಲಿ ತನ್ನ ಸಾಮ್ರಾಜ್ಯ ಸ್ಥಾಪನೆ ಮಾಡಿದ. ಅಫಘಾನಿಸ್ತಾನದಿಂದ ಬಾಬರ್ ಬಂದದ್ದರ ಹಿಂದೆ ಯಾರ ಕೈವಾಡವಿತ್ತು ಎಂಬುದನ್ನು ಕೂಡ ತಿಳಿಯಬೇಕಿದೆ. ಬಾಬರ ನಾಲ್ಕು ಸಲ ಭಾರತದೊಳಗೆ ಬರಲು ಪ್ರಯತ್ನಿಸಿದರೂ ಆಗಿರಲಿಲ್ಲ. ಆಗ ದೆಹಲಿಯಲ್ಲಿ ಇಬ್ರಾಹಿಂ ಲೋದಿ ರಾಜ್ಯವಾಳುತ್ತಿದ್ದ. ಆತನನ್ನು ಸೋಲಿಸಲು ಆತನ ಸಂಬಂಧಿ ದೌಲತಖಾನ್ ಲೋದಿ ಯೋಚಿಸಿದ. ಆತ ಇಬ್ರಾಹಿಂ ಲೋದಿರಾಜ್ಯದಲ್ಲಿ ಪಂಜಾಬಿನ ರಾಜ್ಯಪಾಲ ಆಗಿದ್ದ. ಮೇವಾಡದ ದೊರೆ ರಾಣಾ ಸಂಗಾ (ಸಂಗ್ರಾಮಸಿಂಗ್) ಕೂಡ ಹೀಗೇ ಯೋಚನೆ ಮಾಡಿದ. 'ಇಬ್ರಾಹಿಂ ಲೋದಿಯನ್ನು ಸೋಲಿಸಲು ಬಾಬರನ ಸಹಾಯ ಪಡೆಯಬೇಕು. ಬಾಬರ್ ಲೂಟಿ ಮಾಡಿಕೊಂಡು ಹೋದಮೇಲೆ ದೆಹಲಿ ಮತ್ತು ಆಗ್ರಾಗಳು ನಮ್ಮ ಕೈವಶವಾಗುವವು' ಎಂಬ ಯೋಚನೆ ಅವರಿಗಿತ್ತು. ಹೀಗೆ ಷಡ್ಯಂತ್ರ ರೂಪಿಸಲಾಯಿತು. 1526ರಲ್ಲಿ ಪಾನಿಪತ್‌ನಲ್ಲಿ ಬಾಬರ್ ಮತ್ತು ಇಬ್ರಾಹಿಂ ಲೋದಿ ಮಧ್ಯೆ ಯುದ್ಧವಾಯಿತು. ಇಬ್ರಾಹಿಂ ಲೋಧಿ ಸತ್ತ, ಬಾಬರ್ ಗೆದ್ದ. ಆದರೆ ಲೂಟಿ ಮಾಡಿಕೊಂಡು ವಾಪಸ್ ಹೋಗದೆ ದೆಹಲಿಯಲ್ಲಿ ಮೊಗಲ್ ಸಾಮ್ರಾಜ್ಯ ಸ್ಥಾಪಿಸಿದ. ರಾಣಾ ಸಂಗಾ ಮತ್ತು ದೌಲತಖಾನ್ ಯೋಚನೆಗಳು ಬುಡಮೇಲಾದವು.

ಬಾಬರ್ ವಿರುದ್ಧ ರಾಣಾ ಸಂಗಾ ಸೈನ್ಯ ಜಮಾಯಿಸತೊಡಗಿದ. ಇಬ್ರಾಹಿಂ ಲೋದಿಯ ಸಹೋದರ ಮುಹಮ್ಮದ್ ಲೋದಿ ಕೂಡ ಸಹಾಯಹಸ್ತ ಚಾಚಿದ. ಅಫಘಾನಿಸ್ತಾನದ ಅತೃಪ್ತ ಪಾಳೆಯಗಾರರ ಸೈನ್ಯವನ್ನು ಜಮಾಯಿಸಿ ರಜಪೂತ ಸೈನ್ಯದ ಜೊತೆ ಕೂಡಿಸಿದ. ಹೀಗೆ ರಜಪೂತ – ಅಫಘಾನ ಮೈತ್ರಿಯ ಸೈನ್ಯ ಮತ್ತು ಬಾಬರ್ ಸೈನ್ಯದ ಮಧ್ಯೆ ಖಾನವಾದಲ್ಲಿ ನಡೆದ ಯುದ್ಧದಲ್ಲಿ ಬಾಬರ್ ಜಯಶಾಲಿಯಾದ.

'ಹಿಂದುಗಳ ಭಾವನೆಗೆ ಧಕ್ಕೆ ತಗಲದಂತೆ ಆಡಳಿತ ನಡೆಸು' ಎಂದು ಬಾಬರ್ ತನ್ನ ಮಗ ಹುಮಾಯೂನ್‌ಗೆ ತಿಳಿಸಿದ. ಹುಮಾಯೂನ್ (1530–1556) ದೆಹಲಿಯ ಸಿಂಹಾಸನಾಧಿಪತಿಯಾದ. 1540ರಲ್ಲಿ ಶೇರ್ ಶಹಾ ಸೂರಿಯಿಂದ ಪರಾಭವಗೊಂಡ ಹುಮಾಯೂನ್ ಇರಾನ ಕಡೆ ಹೋದ. ಅವರ ಸಹಾಯದೊಂದಿಗೆ 1555ರಲ್ಲಿ ಸಿಕಂದರ್ ಶಹಾ ಸೂರ್‌ನನ್ನು ಸೋಲಿಸಿ ದೆಹಲಿ ವಶಪಡಿಸಿಕೊಂಡ. 1556ರಲ್ಲಿ ಹುಮಾಯೂನ್ ಗ್ರಂಥಾಲಯದ ಮೆಟ್ಟಿಲಿಂದ ಜಾರಿಬಿದ್ದು ಸತ್ತ. 1556ರಲ್ಲಿ ಹುಮಾಯೂನ್ ಮಗನಾದ ಅಕ್ಬರ್ ದೆಹಲಿ ಚಕ್ರವರ್ತಿಯಾದ. ಈ ಸಂದರ್ಭದಲ್ಲಿ ಸೂರ್ ವಂಶದ ಕೊನೆಯ ದೊರೆ ಆದಿಲ್ ಶಹಾ ಸೂರ್ ಬಂಗಾಲ ಪ್ರದೇಶ ಆಳುತ್ತಿದ್ದ. ಹುಮಾಯೂನನ ಸಾವಿನ ಸುದ್ದಿ ತಿಳಿದಕೂಡಲೆ ಆತನ ಪ್ರಧಾನಿ ಹೇಮ (ಹೇಮಚಂದ್ರ) ದೆಹಲಿ ಮೇಲೆ ದಾಳಿ ಮಾಡಲು ಬಂಗಾಲದಿಂದ ಸೈನ್ಯದೊಂದಿಗೆ ದೌಡಾಯಿಸಿದ. 1556ನೇ ಅಕ್ಟೋಬರ್ 7ರಂದು ದೆಹಲಿಯನ್ನು ವಶಪಡಿಸಿಕೊಂಡ. ತನ್ನ ದೊರೆ ಬಂಗಾಲದ ಆದಿಲ ಶಹಾ ಸೂರಿಯನ್ನು ಹಿಂದೆ ಸರಿಸಿ ತಾನೇ ರಾಜ ಎಂದು ಘೋಷಿಸಿದ. ಆದರೆ 1556ನೇ ನವೆಂಬರ್ 5ರಂದು ಪಾಣಿಪತ್‌ನಲ್ಲಿ ನಡೆದ ನಡೆದ ಯುದ್ಧದಲ್ಲಿ ಹೇಮು ಸತ್ತು ಅಕ್ಬರನ ಸೈನ್ಯ ಜಯಶಾಲಿಯಾಯಿತು.

ಅಂಬೇರನ ರಜಪೂತ ರಾಜಕುಮಾರಿ ಜೋಧಾಬಾಯಿಯನ್ನು ಅಕ್ಬರ್ ಚಕ್ರವರ್ತಿ ಮದುವೆಯಾದ. ಅವನ ದರ್ಬಾರಿನ ನವರತ್ನಗಳಲ್ಲಿ ರಾಜಾ ಮಾನಸಿಂಗ್, ಬೀರಬಲ್, ರಾಜಾ ತೋಡರಮಲ್ ಮತ್ತು ತಾನಸೇನ್ ಕೂಡ ಇದ್ದರು.

ಹಳದಿಘಾಟ್ ಮೈದಾನದಲ್ಲಿ ಅಕ್ಬರ್ ಮತ್ತು ರಾಣಾ ಪ್ರತಾಪಸಿಂಗ್ ಅವರ ಮಧ್ಯೆ ಯುದ್ಧವಾದಾಗ ಅಕ್ಬರನ ಸೇನಾಪತಿ ರಾಜಾ ಮಾನಸಿಂಗ್ ಇದ್ದ. ರಾಣಾ ಪ್ರತಾಪನ ಸೇನಾಪತಿ ಹಕೀಂ ಖಾನ್ ಸೂರ್ ಇದ್ದ.

ಅಕ್ಬರ್ ಕಾಲದಲ್ಲಿ ಅಯೋಧ್ಯೆಯಲ್ಲಿದ್ದ ತುಳಸೀದಾಸರು 'ರಾಮಚರಿತ ಮಾನಸ' ಮಹಾಕಾವ್ಯ (ತುಳಸೀ ರಾಮಾಯಾಣ) ಬರೆದು ಪ್ರಸಿದ್ಧರಾಗಿದ್ದರು. ಸ್ಥಳೀಯ ಅವಧ ಭಾಷೆಯಲ್ಲಿ ರಾಮಾಯಣ ಬರೆದದ್ದಕ್ಕೆ ಬ್ರಾಹ್ಮಣರು ಕಿಡಿ ಕಾರಿದರು. ಹೀಗಾಗಿ ತುಳಸೀದಾಸ ತಮ್ಮ ಕೊನೆಯ ದಿನಗಳನ್ನು ಅಯೋಧ್ಯೆಯ ಮಸೀದಿಯೊಂದರಲ್ಲಿ ಕಳೆದರು. ಇದನ್ನರಿತ ಅಕ್ಬರ್ ಅವರನ್ನು ಅರಮನೆಗೆ ಕರೆತರಲು

ಪಲ್ಲಕ್ಕಿಯನ್ನು ಕಳಿಸಿದ. ಆದರೆ ತುಳಸೀದಾಸರು ಹೋಗಲಿಲ್ಲ. ಅರಮನೆಗಿಂತ ದೇವಮನೆಯೆ ವಾಸಿ ಎಂಬ ಯೋಚನೆ ಅವರದಾಗಿತ್ತು.

**ಬಹಮನಿ ರಾಜವಂಶ**

14ನೇ ಶತಮಾನದ (1347) ಬಹಮನಿ ಸಾಮ್ರಾಜ್ಯ ಹಸನ್ ಎಂಬ ವ್ಯಕ್ತಿಯಿಂದ ಕಲಬುರಗಿಯಲ್ಲಿ ಪ್ರಾರಂಭವಾಯಿತು. ಆತ ತನಗೆ ದೆಹಲಿಯಲ್ಲಿ ಸಹಾಯ ಮಾಡಿದ ಗಂಗೂ ಎಂಬ ಬ್ರಾಹ್ಮಣನ ಹೆಸರನ್ನು ತನ್ನ ತಂದೆಯ ಸ್ಥಾನದಲ್ಲಿಟ್ಟು ಹಸನ್ ಗಂಗೂ ಬಹಮನಿ ಎನಿಸಿಕೊಂಡ!

ಮೂರನೇ ಮುಹಮ್ಮದ್ ಶಹಾ (1463–1482) ಒಂಬತ್ತು ವರ್ಷದವನಿದ್ದಾಗ ಪಟ್ಟಕ್ಕೆ ಬಂದ. ಬಾಲಕನಾಗಿದ್ದ ರಾಜನಿಗೆ ಪ್ರಾಮಾಣಿಕ ಮತ್ತು ಪ್ರತಿಭಾಶಾಲಿ ಮುಹಮ್ಮದ್ ಗವಾನ್ (1466–1481) ಸಲಹೆಗಾರನಾದ. ರಾಜ್ಯದ ಆಡಳಿತದ ಜವಾಬ್ದಾರಿ ಆತನ ಮೇಲಿತ್ತು. ಆತ ಬಹಮನಿ ಸಾಮ್ರಾಜ್ಯವನ್ನು ಉಚ್ಛ್ರಾಯ ಸ್ಥಿತಿಗೆ ತಂದ. ಇರಾನಿನ ಜೀಲಾನ್ ಪ್ರದೇಶದಿಂದ ಬಂದ ಮುಹಮ್ಮದ್ ಗವಾನ್ ಅಫಾಕಿ (ಪರಕೀಯ) ಆಗಿದ್ದ. ಹೀಗಾಗಿ ಸ್ಥಳೀಯ ದಖನಿ ಮುಸ್ಲಿಮರು ಆತನ ವಿರುದ್ಧ ದ್ವೇಷ ಸಾಧಿಸುತ್ತಲೇ ಇದ್ದರು. ಕೊನೆಗೆ ರಾಜನಿಗೆ ಸುಳ್ಳು ಹೇಳುವ ಮೂಲಕ ಮುಹಮ್ಮದ್ ಗವಾನ್ ಮೇಲೆ ರಾಜದ್ರೋಹದ ಆರೋಪ ಹೊರಿಸಿ ಮರಣದಂಡನೆ ಆಗುವಂತೆ ನೋಡಿಕೊಂಡರು. ಅಲ್ಲಿಂದಲೇ ಬಹಮನಿಗಳ ಅವನತಿಯ ಲಕ್ಷಣಗಳು ಕಾಣತೊಡಗಿದವು.

**ಆದಿಲಶಾಹಿ ರಾಜವಂಶ**

1482ರಲ್ಲಿ ನಾಲ್ಕನೇ ಮುಹಮ್ಮದ್ ಶಹಾ ಬಹಮನಿಯ ಆಳ್ವಿಕೆ ಪ್ರಾರಂಭವಾದ ನಂತರ ಬಹಮನಿ ಸಾಮ್ರಾಜ್ಯ ಕುಸಿಯಲು ಪ್ರಾರಂಭಿಸಿತು. ಮಲೀಕ್ ಅಹ್ಮದ್ ಭೈರಿಯಿಂದ ಅಹಮದನಗರದಲ್ಲಿ ನಿಜಾಂ ಶಾಹಿ, ಸುಲ್ತಾನ್ ಕುತ್ಬ ಉಲ್ ಮುಲ್ಕ್‌ನಿಂದ ಗೋಲ್ಕೊಂಡಾದಲ್ಲಿ ಕುತುಬಶಾಹಿ, ಕಾಸಿಂ ಬರೀದನಿಂದ ಬೀದರನಲ್ಲಿ ಬರೀದಶಾಹಿ, ಫತುಲ್ಲಾ ಇಮಾದ್ ಉಲ್ ಮುಲ್ಕ್‌ನಿಂದ ಬೆರಾರ್‌ನಲ್ಲಿ ಇಮಾದ್ ಶಾಹಿ, ಕೊನೆಗೆ 1489ರಲ್ಲಿ ಯುಸೂಫ್ ಆದಿಲ್ ಖಾನ್ ವಿಜಯಪುರದಲ್ಲಿ ಆದಿಲಶಾಹಿ ಸಾಮ್ರಾಜ್ಯ ಸ್ಥಾಪಿಸಿದ.

ಯುಸೂಫ್ ಆದಿಲ್ ಖಾನ್ ಮರಾಠಾ ಮಹಿಳೆ ಪೂಂಜಿಖಾತೂನ್ (ಲಕ್ಷ್ಮೀಬಾಯಿ)ಳನ್ನು ಮದುವೆಯಾಗಿ ಪಟ್ಟದ ರಾಣಿಯಾಗಿಸಿದ. ಅವಳಿಂದ ಆದಿಲಶಾಹಿ ಸಂತತಿ ಆರಂಭವಾಯಿತು.

ಯುಸೂಫ್ ಆದಿಲಶಾಹಿ ದರ್ಬಾರಲ್ಲಿ ಬಹುಪಾಲು ಹಿಂದೂಗಳೇ ಅಧಿಕಾರಿಗಳಾಗಿದ್ದರು. ರಾಜಾ. ನಾಯಕ. ರಾವ್ ಬಿರುದುಗಳೊಂದಿಗೆ ಅವರನ್ನು ಸನ್ಮಾನಿಸುತ್ತಿದ್ದ. ಆತನ ಮಗ ಇಸ್ಮಾಯಿಲ್ (1510–1534) ಸಿಂಹಾಸನ ಏರಿದಾಗ

ಬಾಲಕನಾಗಿದ್ದ. ಕಮಾಲಖಾನ್ ಎಂಬ ಅಧಿಕಾರಿ ಆತಳಿತ ನೋಡಿಕೊಳ್ಳುತ್ತಿದ್ದ. ಆತ ಸುನ್ನಿ ಆಗಿದ್ದ. ಷಿಯಾ ರಾಜಮನೆತನ ಉದಾರವಾದಿಯಾಗಿದ್ದರೂ ದ್ವೇಷ ಹೊಂದಿದ್ದ. ಇಸ್ಮಾಯಿಲ್, ಆತನ ತಾಯಿ ಪೂಂಜಿ ಖಾತೂನ್ (ಬಪೂಜಿ ಖಿನುಂ) ಮತ್ತು ಸೋದರತ್ತೆ ದಿಲ್‌ಷಾದ್ ಆಘಾ ಅವರಿಗೆ ಅರಮನೆಯಲ್ಲೇ ಉಳಿಯುವಂತೆ ದಿಗ್ಬಂಧನ ಹಾಕಿದ. ನಿಷ್ಠಾವಂತನಾಗಿದ್ದ ಯುಸೂಫ್ ತುರ್ಕ್ ಎಂಬಾತನಿಂದ ಕಮಾಲ್ ಖಾನನನ್ನು ಪೂಂಜಿ ಖಾತೂನ್ ಕೊಲ್ಲಿಸಿದಳು. ಈ ಸಂಘರ್ಷದಲ್ಲಿ ಆತನ ಮಗ ಸಫ್ದರ್ ಖಾನ್ ಕೂಡ ಸತ್ತ.

ಇದೇ ಸಂದರ್ಭದಲ್ಲಿ ಅಂದರೆ 1514ರಲ್ಲಿ ಬೀದರಿನ ಅಮೀರ್ ಬರೀದ್, ಗೋಲ್ಕೊಂಡಾ ಮತ್ತು ಬೆರಾರ್ ಸುಲ್ತಾನರ ಸಹಾಯದೊಂದಿಗೆ ಷಿಯಾ ಪಂಗಡದ ಆದಿಲಶಾಹಿ ರಾಜ್ಯವನ್ನು ನಿರ್ನಾಮ ಮಾಡುವುದಕ್ಕಾಗಿ ದಂಡೆತ್ತಿ ಬಂದ. ಆದರೆ ವಿಜಾಪುರದ ಸೈನ್ಯ ಅವರನ್ನು ಹಿಮ್ಮೆಟ್ಟಿಸಿತು. ಬೀದರಿನ ಅಮೀರ ಬರೀದ ವಿಜಾಪುರದ ಮೇಲೆ ಸಮಯ ಸಿಕ್ಕಾಗಲೆಲ್ಲ ದಾಳಿ ಮಾಡುತ್ತಿದ್ದ. ಕೊನೆಗೆ ಇಸ್ಮಾಯಿಲ್ ಬೀದರ ಮೇಲೆ ದಾಳಿ ಮಾಡಿ ಅಮೀರ ಬರೀದನನ್ನು ಬಂಧಿಸಿದ. ಗೊಲ್ಕೊಂಡಾದ ಕುತುಬ್ ಶಾಹಿ ಮೇಲೆ ದಂಡೆತ್ತಿ ಹೋದ ಸಂದರ್ಭದಲ್ಲಿ ಇಸ್ಮಾಯಿಲ್ ಬೇನೆ ಬಿದ್ದು 1534ರಲ್ಲಿ ನಿಧನನಾದ.

ನಂತರ ಇಸ್ಮಾಯಿಲ್‌ನ ಹಿರಿಯ ಮಗ ಮಲ್ಲು ಆದಿಲ ಶಹಾ (ಆಗಸ್ಟ್ 1534 – ಫೆಬ್ರುವರಿ 1535) ವಿಜಾಪುರದ ದೊರೆ ಆದ. ಆತ ದುಶ್ಚಟಗಳಿಗೆ ಬಲಿಯಾದ ಕಾರಣ ಆತನ ಅಜ್ಜಿ ಪೂಂಜಿ ಖಾತೂನ್ ಅವನನ್ನು ಬಂಧಿಸಿ ಕಣ್ಣು ಕೀಳಿಸಿದಳು. ನಂತರ ಆತನ ತಮ್ಮ ಮೊದಲನೇ ಇಬ್ರಾಹಿಂ ಆದಿಲಶಾಹಿ (1535–1557) ರಾಜನಾದ. ಸ್ಥಳೀಯರು, ಅಫಾಕಿಗಳು (ಇರಾನ ಮುಂತಾದ ಕಡೆಗಳಿಂದ ಬಂದ ಷಿಯಾ ಮುಸ್ಲಿಮರು) ಮತ್ತು ಆಫ್ರಿಕಾದಿಂದ ಬಂದ ಹಬ್ಸಿಗಳಿಗೆ ಆಡಳಿತದಲ್ಲಿ ಸಮಾನವಾಗಿ ಕಂಡು ಸಮತೋಲನ ಸಾಧಿಸಿದ. ಆತನ ಸೈನ್ಯದಲ್ಲಿ ಮೂರು ಸಾವಿರ ಮಂದಿ ಮರಾಠಾ ಗೆರಿಲ್ಲಾಯುದ್ಧ ಪರಿಣತರಿದ್ದರು. ದಕ್ಷಿಣದ ಮುಸ್ಲಿಮ ರಾಜರು ಪದೆ ಪದೆ ಯುದ್ಧ ಸಾರುತ್ತಿದ್ದರಿಂದ ಜುಗುಪ್ಸೆಗೊಂಡಿದ್ದ.

ಮೊದಲನೇ ಇಬ್ರಾಹಿಂ ನಿಧನದ ನಂತರ ಆತನ ಹಿರಿಯ ಮಗ ಮೊದಲನೇ ಅಲಿ ಆದಿಲ ಶಹಾ (1557–1580) ಪಟ್ಟಕ್ಕೆ ಬಂದ. ಪಟ್ಟಾಭಿಷೇಕದ ಸಂದರ್ಭದಲ್ಲಿ ಸುನ್ನಿ ಪಂಥದಿಂದ ಆದಿಲಶಾಹಿಗಳ ಮೂಲವಾದ ಷಿಯಾಪಂಥ ಸ್ವೀಕರಿಸಿದ.

ಕಲ್ಯಾಣ ಮತ್ತು ಸೋಲಾಪುರ ಪ್ರದೇಶಗಳು ಆದಿಲಶಾಹಿಗಳಿಗೆ ಸೇರಿದ್ದರಿಂದ ಅವುಗಳನ್ನು ಬಿಟ್ಟುಕೊಡಬೇಕೆಂದು ಅಹಮದನಗರದ ಹುಸೇನ್ ಶಹಾಗೆ ಒಂದನೇ ಅಲಿ ಆದಿಲ ಶಹಾ ಹೇಳಿ ಕಳಿಸಿದ. ಆತ ಒಪ್ಪದೆ ಇದ್ದಾಗ ವಿಜಯನಗರದ ಸಹಾಯದೊಂದಿಗೆ ದಾಳಿ ಮಾಡಿ ವಿಜಯ ಸಾಧಿಸಿದ. ಹುಸೇನ್ ಶಹಾ, ತನ್ನ

ಮಗಳು ಚಾಂದಬೀಬಿಯನ್ನು ಒಂದನೇ ಅಲಿ ಆದಿಲ್ ಶಹಾಗೆ ಕೊಟ್ಟು ಮದುವೆ ಮಾಡಿದ.

1565ರಲ್ಲಿ ದಕ್ಷಿಣದ ಮುಸ್ಲಿಂ ರಾಜವಂಶಗಳು ಒಂದಾಗಿ ವಿಜಯನಗರದ ಮೇಲೆ ವಿಜಯ ಸಾಧಿಸಿದವು. ಅಳಿಯ ರಾಮರಾಯ ಈ ಯುದ್ಧದಲ್ಲಿ ಮಡಿದ.

ದಿನಗಳೆದಂತೆ ಒಂದನೇ ಅಲಿ ಆದಿಲ್ ಶಾಹಿ ರಾಜ್ಯಾಡಳಿತದಲ್ಲಿ ಅಫಾಕಿಗಳ ಕೈ ಮೇಲಾಯಿತು. ದಖನಿ ಮುಸ್ಲಿಮರಲ್ಲಿ ಅಸಮಾಧಾನ ಶುರುವಾಯಿತು. ಅವನ ತಂದೆ ಮೊದಲನೇ ಇಬ್ರಾಹಿಂ ಆದಿಲಶಾಹಿಯ ಸಮತೋಲನದ ಆಡಳಿತಕ್ಕೆ ಚ್ಯುತಿ ಬಂದಿತು. ಶೀಥಲಸಮರ ಶುರುವಾಯಿತು. ಸರಳ ಸಹಜವಾಗಿದ್ದ ದೊರೆ ಆಡಳಿತ ವ್ಯವಸ್ಥೆಯಲ್ಲಿ ಷಿಯಾಗಳಿಗೆ ವಿಶೇಷ ಅವಕಾಶ ಕಲ್ಪಿಸುವ ಮೂಲಕ ಸೃಷ್ಟಿಯಾದಂಥ ಅಸಹನೆಗೆ ಬಲಿಯಾದ. 1580ರಲ್ಲಿ ಅತೃಪ್ತರು ಒಳಸಂಚುಮಾಡಿ ಅರಮನೆಯ ಒಬ್ಬ ಖೋಜಾನಿಂದ ಆತನ ಕೊಲೆ ಮಾಡಿಸಿದರು. ಆತ ಸಾದಾ ಬಿಳಿಬಟ್ಟೆ ಧರಿಸುತ್ತಿದ್ದ. ಶಾಖಾಹಾರಿಯಾಗಿದ್ದ ಆತ ನೆಲದ ಮೇಲೆ ಕೂಡುತ್ತಿದ್ದ, ಮಲಗುತ್ತಿದ್ದ ಎಂದು ಅಂದಿನ ಇತಿಹಾಸಕಾರ ಶಿರಾಜಿ ದಾಖಲಿಸಿದ್ದಾನೆ.

ಮೊದಲನೇ ಅಲಿ ಆದಿಲಶಾಹಿಗೆ ಮಕ್ಕಳಿಲ್ಲದ ಕಾರಣ, ಆತನ ಸಹೋದರ ತಹಮುಸಿಫನ 9 ವರ್ಷದ ಮಗ ಎರಡನೇ ಇಬ್ರಾಹಿಂ ಆದಿಲಶಾಹಿಯನ್ನು ಪಟ್ಟಕ್ಕೆ ಕೂಡಿಸಲಾಯಿತು. ವೀರ ಮತ್ತು ಪ್ರತಿಭಾವಂತಳಾಗಿದ್ದ ಚಾಂದಬೀಬಿ ಆಡಳಿತದ ಉಸ್ತುವಾರಿ ನೋಡಿಕೊಂಡಳು.

ಎರಡನೇ ಇಬ್ರಾಹಿಂ ಆದಿಲಶಾಹಿ 'ಕಿತಾಬೇ ನೌರಸ್' ಎಂಬ ಸಂಗೀತಗ್ರಂಥ ರಚಿಸಿ ಗಣಪತಿ ಸರಸ್ವತಿಯರನ್ನು ಪ್ರಾರ್ಥಿಸಿದ. ತನ್ನ ಅರಮನೆಯ ಪಕ್ಕದಲ್ಲೇ ನರಸಿಂಹ (ದತ್ತ) ದೇವಸ್ಥಾನ ಕಟ್ಟಿಸಿದ. ಪ್ರಜೆಗಳು ಅವನಿಗೆ ಪ್ರೀತಿಯಿಂದ 'ಜಗದ್ಗುರು' ಎಂದು ಕರೆದರು.

ಆ ಸಂದರ್ಭದಲ್ಲಿ ಚಾಂದಬೀಬಿ ಅನೇಕ ಒಳಜಗಳಗಳನ್ನು ನಿಭಾಯಿಸಿದಳು. 1595ರಲ್ಲಿ ಅಹಮದನಗರದ ನಿಜಾಂ ಶಾಹಿಗಳ ಮೇಲೆ ಅಕ್ಬರ್ ದಾಳಿ ಮಾಡಿದ. ಆಗ ವೀರರಾಣಿ ಚಾಂದಬೀಬಿ ತವರುಮನೆಯ ರಕ್ಷಣೆಗಾಗಿ ಧಾವಿಸಿದಳು. ಆ ಯುದ್ಧವನ್ನು ತಡೆಗಟ್ಟುವಲ್ಲಿ ಸಫಲಳಾದಳು. ನಂತರ 'ಮೊಗಲರ ಜೊತೆ ಹೊಂದಾಣಿಕೆ ಮಾಡಿಕೊಳ್ಳುತ್ತಿದ್ದಾಳೆ' ಎಂಬ ಸುಳ್ಳಿಗೆ ಬಲಿಯಾಗಬೇಕಾಯಿತು. ಆಕೆಯ ಸೈನಿಕರಿಂದಲೇ ಹತ್ಯೆಯಾಯಿತು.

**ಮಹಿಳಾ ಸೈನ್ಯ ಕಟ್ಟಿದ ಉಳ್ಳಾಲದ ರಾಣಿ ಅಬ್ಬಕ್ಕ**

ಜೈನ ಚೌಟಾ ಮನೆತನಕ್ಕೆ ಸೇರಿದ ಉಳ್ಳಾಲದ ರಾಣಿ ಅಬ್ಬಕ್ಕ (1525–1582) ಸೌಹಾರ್ದ ಪರಂಪರೆಗೆ ಹೆಸರಾದವಳು. ತುಳು ನಾಡಿನ ಮೊಗವೀರರು, ಬ್ಯಾರಿ ಮುಸ್ಲಿಮರು, ಬಂಟರು, ಬಿಲ್ಲವರು, ಕುಲಾಲರು ಮುಂತಾದ ಸಮಾಜಗಳ ವೀರರನ್ನು

ಸೇರಿಸಿಕೊಂಡು ಪ್ರಬಲ ಸೈನ್ಯ ಕಟ್ಟಿ ಪೋರ್ತುಗೀಜರ ಜೊತೆ ಹೋರಾಡಿ ಅಮರಳಾದವಳು. 1555 ರಿಂದ 1581ರ ವರೆಗೆ ಪೋರ್ತುಗೀಜರ ಜೊತೆ ಹೋರಾಡುತ್ತ ಕೊನೆ ಯುದ್ಧದಲ್ಲಿ ಗಾಯಗೊಂಡು 1582ರಲ್ಲಿ ತೀರಿಕೊಂಡಳು. 1570ರ ಯುದ್ಧದಲ್ಲಿ ವಿಜಯಪುರದ ಮೊದಲನೇ ಅಲಿ ಆದಿಲ್ ಶಹಾ ಕೂಡ ಅವಳ ಬೆಂಬಲಕ್ಕೆ ಸೈನ್ಯ ಕಳಿಸಿದ್ದ. ಅಬ್ಬಕ್ಕ ತನ್ನ ತುಳುನಾಡಿನ ದುಡಿಯುವ ಹೆಣ್ಣುಮಕ್ಕಳಿಗೆ ಯದ್ಧ ತರಬೇತಿ ನೀಡಿ ಮಹಿಳಾ ಸೈನ್ಯ ಕಟ್ಟಿದ್ದಳು. ಆಕೆಯ ಪತಿ ಲಕ್ಷ್ಮಪ್ಪ ಅರಸ ಪೋರ್ತುಗೀಜರ ಜೊತೆ ಶಾಮೀಲಾಗಿ ಕೊನೆಯ ಯುದ್ಧದಲ್ಲಿ ಅಬ್ಬಕ್ಕ ಸೋಲಲು ಕಾರಣನಾದ!

### ಶಿವಾಜಿ

17ನೇ ಶತಮಾನದ (1630–1680) ಛತ್ರಪತಿ ಶಿವಾಜಿಯ 23 ಅಧಿಕಾರಿಗಳು ಮುಸ್ಲಿಮರಾಗಿದ್ದರು. ಶಿವಾಜಿಯ ಹಿಂದವೀ ಸ್ವರಾಜ್ಯದ ಮುಖ್ಯ ಸರನೋಬತ್ (ಶಿವಾಜಿಯ ಒಟ್ಟು ಒಂದೂವರೆ ಲಕ್ಷ ಸೈನ್ಯದ ಸರ್ವೋಚ್ಚ ಅಧಿಕಾರಿ) ನೂರ್ ಖಾನ್ ಬೇಗ್. ಆ ಸೈನ್ಯದಲ್ಲಿ 60 ಸಾವಿರ ಮುಸ್ಲಿಂ ಸೈನಿಕರಿದ್ದರು. ಇಬ್ರಾಹಿಂ ಖಾನ್ ತೋಪಖಾನೆಯ ಮುಖ್ಯಸ್ಥನಾಗಿದ್ದ. ಯುದ್ಧ ನೌಕೆಪಡೆಯ ಮುಖ್ಯಸ್ಥನಾಗಿ ದರಿಯಾ ಸಾರಂಗ್ ಇದ್ದ. ಶಿವಾಜಿಯ ಅಂಗರಕ್ಷಕರಲ್ಲಿ ಮುಸ್ಲಿಮರು ಮತ್ತು ದಲಿತರು ಕೂಡ ಇದ್ದರು. ಬಹಳ ಜವಾಬ್ದಾರಿಯುತವಾದ ಶಿವಾಜಿಯ ವಕೀಲ, ಕಾನೂನು ಮಂತ್ರಿ ಮತ್ತು ಪಾರ್ಸಿಯಲ್ಲಿ ರಹಸ್ಯ ಪತ್ರ ಬರೆಯುವಾತ ಕಾಜಿ ಹೈದರ್. ಆಗ್ರಾದಿಂದ ಶಿವಾಜಿ ಪಾರಾಗಲು ಸಹಾಯ ಮಾಡಿ ಔರಂಗಜೇಬನ ಸೈನಿಕರಿಂದ ಹತನಾದವ ನಂಬಿಗಸ್ಥ ಸೇವಕ ಮದರಿ ಮೆಹತರ್. 'ರಾಜಕೀಯ ಭೇಟಿಯ ಸಂದರ್ಭದಲ್ಲಿ ಅಫಜಲ್ ಖಾನ್ ಕೊಲೆ ಮಾಡುತ್ತಾನೆ' ಎಂದು ಶಿವಾಜಿಗೆ ಎಚ್ಚರಿಸಿ ಗುಪ್ತ ಆಯುಧ 'ವ್ಯಾಘ್ರನಖ' ಕೊಟ್ಟವ ಗುಪ್ತದಳ ಅಧಿಕಾರಿ ರುಸ್ತುಂ ಎ ಜಮಾನ್.

ಭೇಟಿಯ ಸಂದರ್ಭದಲ್ಲಿ ಅಫಜಲ್‌ಖಾನ್ ಶಿವಾಜಿಯನ್ನು ಅಪ್ಪಿಕೊಂಡು ಕೊಲ್ಲಲು ಯತ್ನಿಸಿದ. ಆದರೆ ರುಸ್ತುಂ ಕೊಟ್ಟ ವ್ಯಾಘ್ರನಖದಿಂದ ಶಿವಾಜಿಯು ಅಫಜಲ್ ಖಾನನ ಕೊಲೆ ಮಾಡಿದ. ಆ ವೇಳೆಯಲ್ಲಿ ಶಿವಾಜಿಯ ಕೊಲೆ ಮಾಡಲು ಯತ್ನಿಸಿದಾತ ಅಫಜಲ್ ಖಾನನ ಅಧಿಕಾರಿ ಕೃಷ್ಣಾಜಿ ಭಾಸ್ಕರ ಕುಲಕರ್ಣಿ! ದಲಿತ ಮೂಲದ ಅಂಗರಕ್ಷಕ ಜೀವಾಜಿ ಕೂಡಲೆ ಕಾರ್ಯಪ್ರವೃತ್ತನಾಗಿ ಕೃಷ್ಣಾಜಿ ರುಂಡ ಕತ್ತರಿಸಿದ.

ಶಿವಾಜಿಯ ಎರಡನೇ ಗುರು ಯಾಕೂತ್ ಬಾಬಾ, ಮೂರನೆ ಗುರು ಮೌನಿ ಬಾಬಾ. ವಿಶಾಲಗಢದ ಸೂಫಿ ಸಂತ ಮಲಿಕ್ ರೇಹಾನ್ ಮತ್ತು ಶಿವಾಜಿಯ ಸಂಬಂಧ ಆತ್ಮೀಯವಾಗಿತ್ತು. ಶಿವಾಜಿ ತನ್ನ ರಾಜಧಾನಿ ರಾಯಗಢದಲ್ಲಿ ಮಂದಿರದ ಜೊತೆ ಈದಗಾ ನಿರ್ಮಾಣ ಮಾಡಿದ.

ಶಿವಾಜಿಯ ಅಜ್ಜ ಮಾಲೋಜಿ ಭೋಸಲೆ ಅಹಮದನಗರ ಸುಲ್ತಾನನ ರಾಜ್ಯದಲ್ಲಿ ಮರಾಠಾ ಸರ್ದಾರ ಆಗಿದ್ದರು. ಅವರು ಅಹಮದನಗರದಲ್ಲಿನ ಸೂಫಿ ಸಂತ ಹಜರತ್ ಶಹಾ ಶರೀಫರ ಅನುಯಾಯಿಯಾಗಿದ್ದರು. ಮಾಲೋಜಿಯವರು ಆ ಸೂಫಿ ಸಂತನ ಹೆಸರು ಇಬ್ಭಾಗ ಮಾಡಿ ತಮ್ಮ ಮೊದಲ ಮಗನಿಗೆ ಶಹಾಜಿ ಎಂದು ಹೆಸರಿಟ್ಟರು. ಎರಡನೆಯ ಮಗನಿಗೆ ಶರೀಫಜಿ ಎಂದು ಕರೆದರು. ಆ ಶಹಾಜಿಯ ಮಗನೇ ಛತ್ರಪತಿ ಶಿವಾಜಿ ಮಹಾರಾಜ.

**ಪ್ಲಾಸಿ ಕಾಳಗ, ಸೂಫಿ-ಸನ್ಯಾಸಿ ಐಕ್ಯ ಹೋರಾಟ**

1757ರಲ್ಲಿ ನಾದಿಯಾ ಜಿಲ್ಲೆಯ ಪ್ಲಾಸಿ ಎಂಬಲ್ಲಿ ಬಂಗಾಲ್ ನವಾಬ್ ಸಿರಾಜುದ್ದೌಲ್ ಮತ್ತು ರಾಬರ್ಟ್ ಕ್ಲೈವ್ ನೇತೃತ್ವದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮಧ್ಯೆ ನಡೆದ ಯುದ್ಧದಲ್ಲಿ ಸಿರಾಜುದ್ದೌಲ್ ಸೋಲಲು ಅವನ ನಂಬಿಗಸ್ಥರೇ ಕಾರಣರಾದರು. ಆತನ ಸೇನಾಧಿಪತಿ ಆಗಿದ್ದ ಮೀರ್ ಜಾಫರ್, ದಿವಾನ ರಾಮ ರಾರೇ, ಚಿಕ್ಕಮ್ಮ ಘಸಿತಿ ಬೇಗಂ, ವ್ಯಾಪಾರಸ್ಥ ಅಮೀನ್ ಚಂದ್ರ ಮತ್ತು ಲೇವಾದೇವಿಗಾರ (ಬ್ಯಾಂಕರ್) ಜಗತ್ ಸೇಠ್ ಮುಂತಾದವರು ಬ್ರಿಟಿಷರ ಜೊತೆ ಸೇರಿ ಸಿರಾಜುದ್ದೌಲ್‌ಗೆ ಮೋಸ ಮಾಡಿ ಸೋಲಿಸಿದರು. ನಂತರ ಮೀರ್ ಜಾಫರ್ ಬಂಗಾಲ ನವಾಬ ಆದ.

ಹೀಗೆ ಬ್ರಿಟಿಷರ ಒಡೆದಾಳುವ ನೀತಿ ಬೆಳೆಯಿತು. ಅದು ಈಗ ಜನಾಂಗದ್ವೇಷ ಸಂಸ್ಕೃತಿಯ ಮೂಲಕ ಮುಂದುವರಿದಿದೆ. ಆದರೆ ಕೋಮು ರಾಜಕೀಯದವರು ಜನರ ಪರಸ್ಪರ ನಂಬಿಕೆಯನ್ನು ಸಂಪೂರ್ಣವಾಗಿ ಅಲುಗಾಡಿಸಲು ಸಾಧ್ಯವಿಲ್ಲ. ಇದಕ್ಕೆಲ್ಲ ಒಂದು ಅಂತ್ಯ ಇದ್ದೇ ಇರುತ್ತದೆ. ಸ್ವಜಾತಿ ಮತ್ತು ಸ್ವಧರ್ಮಿಗಳಿಂದ ಕೂಡ ಮೋಸ ಹೋದರೂ ಜಾತಿ ಮತ್ತು ಧರ್ಮ ಮೀರಿದ ಸಂಬಂಧಗಳು ಮುಂದುವರಿಯುತ್ತಲೇ ಇವೆ.

18ನೇ ಶತಮಾನದಲ್ಲಿ ಅಂದರೆ 1760 ರಿಂದ 1787ರ ವರೆಗೆ ಬಿಹಾರದ ಬಕ್ಸರ್‌ನಿಂದ ಹಿಡಿದು ಬಂಗಾಲದ ಮಿಡ್ನಾಪುರದವರೆಗೆ ಸತತವಾಗಿ ಈಸ್ಟ್ ಇಂಡಿಯಾ ಕಂಪನಿಯ ಸೈನಿಕರ ಜೊತೆ 300 ಫಕೀರರ ಬೆಂಬಲದೊಂದಿಗೆ ಹೋರಾಡುತ್ತ ಮಿಡ್ನಾಪುರದಲ್ಲಿ ಯುದ್ಧ ಮಾಡುತ್ತಲೇ ಹುತಾತ್ಮನಾದವ ಮಜ್ನು ಶಾ ಎಂಬ ವೀರ ಸೂಫಿ ಸಂತ. ಆಗ ಆತನ ಬಲಗೈ ಬಂಟನಾಗಿದ್ದಾತ ಭವಾನಿ ಪಾಠಕ ಎಂಬ ವೀರ ಸನ್ಯಾಸಿ. ಈ ಹೋರಾಟದಲ್ಲಿ ಅವರಿಗೆ ಸಹಸ್ರಾರು ಸ್ವಾತಂತ್ರ್ಯಪ್ರಿಯ ಹಿಂದೂ ಮುಸ್ಲಿಮರು ಒಂದಾಗಿ ಬೆಂಬಲಿಸಿದರು.

**ಟಿಪ್ಪು, ಚೆನ್ನಮ್ಮ, ಝಾನ್ಸಿ ರಾಣಿ**

1799ರಲ್ಲಿ ಬ್ರಿಟಿಷರ ವಿರುದ್ಧ ನಡೆದ ಯುದ್ಧದಲ್ಲಿ ಟಿಪ್ಪು ಹುತಾತ್ಮನಾದ. ಬ್ರಿಟಿಷರು ಶ್ರೀರಂಗಪಟ್ಟಣದ ಮೇಲೆ ವಿಜಯ ಸಾಧಿಸುವಲ್ಲಿ ದಿವಾನ್ ಪೂರ್ಣಯ್ಯನ ಕೈವಾಡವೂ ಇದೆ ಎಂಬ ಸಂಶಯ ಇಂದಿಗೂ ನಿವಾರಣೆಯಾಗಿಲ್ಲ. ಆದರೆ

ಮಂತ್ರಿ ಮೀರ್ ಸಾದಿಕ್ ಮೋಸ ಮಾಡಿದ್ದು ಯುದ್ಧ ಸಮಯದಲ್ಲೇ ಗೊತ್ತಾಗಿದೆ. ಇಂಥ ಮೋಸದ ಘಟನೆಗಳ ಮಧ್ಯೆ ಕೂಡ ದೇಶದಲ್ಲಿ ಮಾನವ ಸಂಬಂಧಗಳು ಮುಂದುವರಿದೇ ಇವೆ.

ರಾಣಿ ಚೆನ್ನಮ್ಮ (1778 –1829) ಬ್ರಿಟಿಷರ ಜೊತೆ 1824ರ ಅಕ್ಟೋಬರ್ 23ರಂದು ಯುದ್ಧ ಮಾಡುವಾಗ ಗೆದ್ದಳು. ಎರಡನೆಯ ಸಲದ ಯುದ್ಧದಲ್ಲಿ ಆಕೆಯ ಸೈನ್ಯದ ಫಿರಂಗಿ ವಿಭಾಗದಲ್ಲಿದ್ದ ಮಲ್ಲಪ್ಪಶೆಟ್ಟಿ ಫಿರಂಗಿಯಲ್ಲಿ ಮದ್ದುಗುಂಡುಗಳ ಜೊತೆ ಸೆಗಣಿ ತುಂಬಿ ನಿಷ್ಕ್ರಿಯವಾಗುವಂತೆ ನೋಡಿಕೊಂಡ. ಹಾವೇರಿ ವೆಂಕಟರಾವ್ ಈ ಕುತಂತ್ರದ ಹಿಂದೆ ಇದ್ದ. 1824ರ ಡಿಸೆಂಬರ್ 5ರಂದು ಕಿತ್ತೂರು ಬ್ರಿಟಿಷರ ಕೈವಶವಾಯಿತು. 1829ನೇ ಫೆಬ್ರುವರಿ 2ರಂದು ರಾಣಿ ಚೆನ್ನಮ್ಮ ಬೈಲಹೊಂಗಲದ ಗೃಹಬಂಧನದಲ್ಲಿ ನಿಧನಳಾದಳು.

1857ರಲ್ಲಿ ನಡೆದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಾಯಕನಾಗಿದ್ದಾತ ಬಹದೂರ್ ಶಾ ಜಫರ್. ಅದೇ ಸ್ವಾತಂತ್ರ್ಯ ಯುದ್ಧದಲ್ಲಿ ಝಾನ್ಸಿ ರಾಣಿ ಲಕ್ಷ್ಮೀಬಾಯಿಗೆ 1500 ಅರಬ ಮುಸ್ಲಿಂ ಅಂಗರಕ್ಷಕರಿದ್ದರು ಎಂದು ಪ್ರತ್ಯಕ್ಷದರ್ಶಿ ವಿಷ್ಣುಭಟ್ ಗೋಡ್ಸೆ 'ಮಾಝಾ ಪ್ರವಾಸ' ಎಂಬ ತನ್ನ ಪ್ರವಾಸ ಕಥನದಲ್ಲಿ ಹೇಳಿದ್ದಾನೆ. ಯುದ್ಧ ಸಮಯದಲ್ಲಿ ಆತ ಝಾನ್ಸಿ ಅರಮನೆಯಲ್ಲಿ ಪೂಜಾಕಾರ್ಯ ನಿರ್ವಹಿಸುತ್ತಿದ್ದ.

ಹೀಗೆ ಹಿಂದೂ ಮುಸ್ಲಿಂ ಸಾಮರಸ್ಯದ ಬಹುದೊಡ್ಡ ಇತಿಹಾಸವನ್ನು ಭಾರತ ಹೊಂದಿದೆ. ಅಲ್ಲದೆ ಧರ್ಮ ಮತ್ತು ರಾಜಕಾರಣದ ಕಲಬೆರಕೆ ಕಾಣ ಸಿಗುವುದಿಲ್ಲ. ಜನರು ತಮ್ಮ ಧರ್ಮ ಮತ್ತು ತಮ್ಮ ರಾಜರುಗಳಿಗೆ ನಿಷ್ಠರಾಗಿದ್ದರು. ಮುಸ್ಲಿಂ ರಾಜನ ಬಳಿ ಹಿಂದೂ ಸೈನಿಕರಿದ್ದರು. ಹಿಂದೂ ರಾಜನ ಬಳಿ ಮುಸ್ಲಿಂ ಸೈನಿಕರಿದ್ದರು. ಆದರೆ ಅವರೆಂದೂ ತಮ್ಮ ಧರ್ಮ ಮತ್ತು ರಾಜಕಾರಣವನ್ನು ಬೆರೆಸಲಿಲ್ಲ. ಯುದ್ಧದಲ್ಲಿನ ಎದುರಾಳಿಗಳು ತಮ್ಮ ವೈರಿಗಳೇ ಹೊರತು ಬೇರೆ ಅಲ್ಲ ಎಂಬುದು ಹಿಂದೂ ಮತ್ತು ಮುಸ್ಲಿಂ ಸೈನಿಕರಿಗೆ ಚೆನ್ನಾಗಿ ಗೊತ್ತಿತ್ತು. ಅನೇಕ ಕಡೆಗಳಲ್ಲಿ ಮೋಸದ ಘಟನೆಗಳು ಸಂಭವಿಸಿದರೂ ಅಲ್ಲಿ ಸ್ವಾರ್ಥ ಕಾರಣವಾಗಿದೆ ಹೊರತಾಗಿ ಧರ್ಮ ಕಾರಣವಾಗಲಿಲ್ಲ.

**ರಾಷ್ಟ್ರವಾದ**

ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮನಾದ ತಮ್ಮ ಒಬ್ಬ ವ್ಯಕ್ತಿಯ ಹೆಸರು ಹೇಳಲು ಇಂದಿಗೂ ಸಾಧ್ಯವಾಗದ ಸಂಘ ಪರಿವಾರದವರು ಭಾರತದ ಜನತೆಗೆ ರಾಷ್ಟ್ರಾಭಿಮಾನದ ಪಾಠ ಕಲಿಸಲು ಮುಂದಾಗಿದ್ದಾರೆ.

ಗಾಂಧಿ, ನೆಹರು, ರವೀಂದ್ರನಾಥ ಟಾಗೋರ್ ಅವರಂಥ ರಾಷ್ಟ್ರಪ್ರೇಮಿಗಳು ಹಿಟ್ಲರನ ಶೈಲಿಯ ರಾಷ್ಟ್ರವಾದದ ಕ್ರೌರ್ಯದ ವಿರುದ್ಧ ಧ್ವನಿ ಎತ್ತಿದ್ದಾರೆ. ರಾಷ್ಟ್ರವಾದಿ ಹಿಟ್ಲರ್ ಎಂಥ ಕ್ರೂರಿಯಾಗಿದ್ದ ಎಂಬುದನ್ನು ಅವರೆಲ್ಲ ಕಣ್ಣಾರೆ ಕಂಡವರಾಗಿದ್ದರು.

ಇಂದು ದೇಶದಲ್ಲಿ ರಾಷ್ಟ್ರಪ್ರೇಮಿಗಳನ್ನು ರಾಷ್ಟ್ರವಾದಿಗಳನ್ನಾಗಿಸುವ ಮತ್ತು ಧರ್ಮವಂತರನ್ನು ಧರ್ಮವಾದಿಗಳನ್ನಾಗಿಸುವ ಪ್ರಯತ್ನ ಮಾಡಲಾಗುತ್ತಿದೆ. ಆ ಮೂಲಕ ದೇಶದಲಿ ಅಭದ್ರತೆಯ ವಾತಾವರಣ ಸೃಷ್ಟಿಸಿ ದೇಶದ ಮೇಲೆ ಹಿಡಿತ ಸಾಧಿಸಲು ಕೋಮುವಾದಿ ಶಕ್ತಿಗಳು ಸತತ ಪ್ರಯತ್ನ ಮಾಡುತ್ತಿವೆ. ಗಾಂಧಿ ಧರ್ಮವಂತರಾಗಿದ್ದರು. ತಾನೊಬ್ಬ ಸನಾತನ ಹಿಂದೂ ಎಂದು ಹೇಳಿಕೊಳ್ಳುತ್ತಿದ್ದರು. ಗೋಡ್ಸೆ ಹಿಂದೂ ಧರ್ಮವಾದಿಯಾಗಿದ್ದ. ಧರ್ಮವಂತ ಗಾಂಧೀಜಿಯನ್ನು ಧರ್ಮವಾದಿ ಗೋಡ್ಸೆ ಕೊಂದುಬಿಟ್ಟ. ಧರ್ಮವಾದಿಗಳು ತಮ್ಮೊಳಗಿನ ಧರ್ಮವಂತರನ್ನು ಮತ್ತು ಇತರೆ ಧರ್ಮದವರನ್ನು ಸಹಿಸುವುದಿಲ್ಲ. ಅವರಿಗೆ ಬಹುತ್ವದಲ್ಲಿ ನಂಬಿಕೆ ಇಲ್ಲ. ತಮ್ಮೊಳಗಿನ ಉದಾರವಾದಿಗಳನ್ನೂ ಅವರು ದ್ವೇಷಿಸುತ್ತಾರೆ. ಅವರು ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ಏಕತಾನತೆಯನ್ನು ಬಯಸುತ್ತಾರೆ. ಈ ಪಾದ ದೇಶದಲ್ಲಿ ಸರ್ವಾಧಿಕಾರವನ್ನು ತರುವಂಥದ್ದಾಗಿದೆ.

**ಧರ್ಮ ರಾಜಕಾರಣ ಮತ್ತು ಜಾತಿ ರಾಜಕಾರಣ**

ನಮ್ಮ ದೇಶದಲ್ಲಿ ಧರ್ಮ ಮತ್ತು ಜಾತಿಗಳು ಮತ ಚಲಾಯಿಸುತ್ತವೆ ಹೊರತಾಗಿ ಮನುಷ್ಯರು ಮತ ಚಲಾಯಿಸುವುದಿಲ್ಲ ಎನ್ನುವ ಮಟ್ಟಿಗೆ ಪರಿಸ್ಥಿತಿ ಹದಗೆಟ್ಟಿದೆ. ದೇಶದಲ್ಲಿ ಧರ್ಮಪ್ರಭುತ್ವ ಮತ್ತು ಜಾತಿಪ್ರಭುತ್ವಗಳು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಘಾಸಿಗೊಳಿಸುತ್ತಲೇ ಇವೆ. ಧರ್ಮ ರಾಜಕಾರಣ ಸಹಜವಾಗಿಯೆ ಜಾತಿ ರಾಜಕಾರಣವನ್ನೂ ತನ್ನ ಹತೋಟಿಗೆ ತೆಗೆದುಕೊಳ್ಳಬಯಸುತ್ತದೆ. 'ನಾವೆಲ್ಲ ಹಿಂದೂ ನಾವೆಲ್ಲ ಒಂದು' ಎನ್ನುವ ಘೋಷಣೆ ಮೂಲಕ ಎಲ್ಲ ವರ್ಣ, ಜಾತಿ ಮತ್ತು ಅಸ್ಪೃಶ್ಯರನ್ನು ಮತ ಗಳಿಸುವುದಕ್ಕಾಗಿ ಒಂದುಗೂಡಿಸುವುದು ಮತ್ತು ಚುನಾವಣೆಯಲ್ಲಿ ಗೆದ್ದ ನಂತರ 'ಅವರಾರೋ ನಾವಾರೋ' ಎನ್ನುವ ರೀತಿಯಲ್ಲಿ ರಾಜಕೀಯ ಮಾಡುವುದು ನಡೆದೇ ಇದೆ. ಎಸ್ಸಿ, ಎಸ್ಟಿ, ಒಬಿಸಿ, ಇತರ ಶೂದ್ರ, ಲಿಂಗಾಯತ ಮುಂತಾದ ಸಮುದಾಯಗಳಲ್ಲಿನ ಅನೇಕರು ಹಿಂದುತ್ವದ ಹೆಸರಿನಲ್ಲಿ ಮನುವಾದಿಗಳ ಜೊತೆ ಒಂದಾಗುವುದು ಕಾಣುತ್ತಿದೆ.

ಹಿಂದೂಧರ್ಮ ಜಾತಿ ಮತ್ತು ವರ್ಣಗಳ ಆಗರವಾಗಿದೆ. ಶೂದ್ರರನ್ನು ಮತ್ತು ಪಂಚಮರನ್ನು ಮನುವಾದಿಗಳು ಸದಾ ಶೋಷಣೆಗೆ ಒಳಪಡಿಸುತ್ತಲೇ ಬಂದಿದ್ದಾರೆ. ನಿಜವಾದ ಅರ್ಥದಲ್ಲಿ ಹಿಂದೂಧರ್ಮ ಎಂದರೆ ಬ್ರಾಹ್ಮಣಶಾಹಿ ಪ್ರಾಬಲ್ಯದ ಧರ್ಮವಾಗಿದೆ. ಈ ಬ್ರಾಹ್ಮಣವಾದವನ್ನು ಯಥಾಸ್ಥಿತಿವಾದಿ ಸವರ್ಣೀಯರು ಬಯಸುತ್ತಾರೆ. ಇವರೆಲ್ಲ ಶೂದ್ರರ ಮೇಲೆ ಅಗಾಧವಾದ ಪರಿಣಾಮ ಬೀರುವಂಥವರಾಗಿದ್ದಾರೆ. ತಾವು ಕೂಡ ಸವರ್ಣೀಯರು ಎಂಬ ಭ್ರಮೆಯಲ್ಲಿ ಎಸ್ಸಿ, ಎಸ್ಟಿ, ಒಬಿಸಿ ಮುಂತಾದವರಲ್ಲಿ ಅನೇಕರು ತೇಲಾಡುತ್ತಾರೆ. ಇಂಥ ಶೂದ್ರರು ಮತ್ತು ಪಂಚಮರು ಕೋಮುವಾದಿ ಪಕ್ಷಗಳ ಅಡಿಯಾಳುಗಳಾಗಿದ್ದಾರೆ. ಆದರೆ ಬ್ರಾಹ್ಮಣ ಮತ್ತು ಇತರೆ ಸವರ್ಣೀಯ ಕುಲದಲ್ಲಿ ಜನಿಸಿದ ಅನೇಕ ಪ್ರಜ್ಞಾವಂತರು ಬಹುತ್ವದಲ್ಲಿ ನಂಬಿಕೆ ಇಟ್ಟವರಾಗಿದ್ದಾರೆ. ಅಂಥವರು ಎಲ್ಲ ಜಾತಿ ಧರ್ಮಗಳಲ್ಲಿ

ಇದ್ದಾರೆ. ಅವರೆಲ್ಲರ ಜಾತ್ಯತೀತ ವಿಚಾರಗಳು ಪ್ರಖರವಾಗಿದ್ದರೂ ಸಾಕಷ್ಟು ಪರಿಣಾಮ ಬೀರುವ ವಾತಾವರಣವಿಲ್ಲದಂತಾಗಿದೆ.

ಧರ್ಮರಾಜಕಾರಣದ ಹೆಸರಿನಲ್ಲಿ ಕೋಮುವಾದವನ್ನು ಬೆಳೆಸುತ್ತಿರುವ ಪಕ್ಷ ತನ್ನ ಪ್ರಾಬಲ್ಯಕ್ಕಾಗಿ ಕೆಳಜಾತಿಗಳನ್ನು ತನ್ನ ತೆಕ್ಕೆಯಲ್ಲಿ ತೆಗೆದುಕೊಳ್ಳುವಲ್ಲಿ ಸದಾ ತಲ್ಲೀನವಾಗಿರುತ್ತದೆ. ಹಿಂದೂ ಧರ್ಮದಲ್ಲಿನ ಎಲ್ಲ ಜಾತಿಗಳ ಜನರು ತಮ್ಮ ಅಸ್ಮಿತೆಗಾಗಿ ಹೋರಾಡುತ್ತಲೇ ಇದ್ದಾರೆ. ಆದರೆ 'ನಾವು ಹಿಂದೂಗಳೆಂದು ಗರ್ವದಿಂದ ಹೇಳಿರಿ' ಎಂಬುದನ್ನು ವಿವಿಧ ಜಾತಿಗಳವರು ಅನಿವಾರ್ಯವಾಗಿ ಒಪ್ಪಿಕೊಳ್ಳುವಂತೆ ಮಾಡಲು ಸಾಧ್ಯವಾಗುವುದು ಕೋಮುಗಲಭೆಗಳಲ್ಲಿ ಮಾತ್ರ. ಆ ಸಂದರ್ಭದಲ್ಲಿ ಎಲ್ಲ ಜಾತಿಗಳ ಜನರು ಮುಸ್ಲಿಮರ ಬಗ್ಗೆ ಸಂಶಯ ತಾಳುವಂಥ ವಾತಾವರಣ ಸೃಷ್ಟಿಸಲಾಗುತ್ತಿದೆ. ಕೋಮುವಾದದ ಈ ಅಂಟುರೋಗ ಭಾರತದ ಹಳ್ಳಿಗಳನ್ನೂ ಪ್ರವೇಶಿಸಿದೆ. ಕೋಮುವಾದಿ ಪಕ್ಷಗಳು ಅಧಿಕಾರಕ್ಕೆ ಬರುವುದಕ್ಕೆ ಮೊದಲು ಕೋಮುಗಲಭೆಗಳನ್ನು ಸೃಷ್ಟಿಸುತ್ತ ಮುಸ್ಲಿಂ ವಿರೋಧಿ ದ್ವೇಷ ಹೊತ್ತಿಸಿ ವಿವಿಧ ಜಾತಿಗಳ ಮತಗಳನ್ನು ಪಡೆಯುವುದು ಸಾಮಾನ್ಯವಾಗಿದೆ.

ಇಂಥ ಪರಿಸ್ಥಿತಿಯಲ್ಲಿ ವಿವಿಧ ಜಾತಿಗಳವರು, ದಲಿತರು, ಅಲ್ಪಸಂಖ್ಯಾತರು ಮತ್ತು ಸವರ್ಣೀಯ ಪ್ರಜ್ಞಾವಂತರು ಒಂದಾಗಿ ರಾಜ್ಯ ಮತ್ತು ಸಾರ್ವತ್ರಿಕ ಚುನಾವಣೆಗಳಲ್ಲಿ ಕೋಮುವಾದಿ ಪಕ್ಷಗಳನ್ನು ಸೋಲಿಸುವುದು ಐತಿಹಾಸಿಕ ಜವಾಬ್ದಾರಿಯಾಗಿದೆ. ಕೋಮುವಾದಿಗಳು ಆಳಿದರೂ ಅವರಿಗೆ ಬಿದ್ದ ಮತಗಳು ಶೇಕಡಾ 40 ಅನ್ನು ತಲುಪಿಲ್ಲ. ಶೇಕಡಾ 60ಕ್ಕಿಂತಲೂ ಹೆಚ್ಚಿನ ಮತಗಳು ಉಳಿದ ಪಕ್ಷಗಳಲ್ಲಿ ಹಂಚಿ ಹೋಗಿವೆ. ವಿರೋಧ ಪಕ್ಷಗಳು ಒಗ್ಗಟ್ಟನ್ನು ಪ್ರದರ್ಶಿಸದಿದ್ದರೆ ಫ್ಯಾಸಿಸ್ಟರು ಈ ದೇಶವನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡು ಬಹುತ್ವದ ಭಾರತವನ್ನು ಕೊಲೆಗಡುಕ ಭಾರತವನ್ನಾಗಿ ಮಾಡುವುದರಲ್ಲಿ ಸಂಶಯವಿಲ್ಲ.

**ಮುಸ್ಲಿಮರು ಮಾಡಬೇಕಾಗಿರುವುದೇನು?**

ಮುಸ್ಲಿಮರು ಒಗ್ಗಟ್ಟಾಗಿ ತಮ್ಮೊಳಗಿನ ಮೂಲಭೂತವಾದಿಗಳನ್ನು ಮತ್ತು ಹೊರಗಿನ ಕೋಮುವಾದಿಗಳನ್ನು ಎದುರಿಸಲು ಸಾಧ್ಯವಾಗದೆ ಹೋದಲ್ಲಿ ಮುಸ್ಲಿಮರ ಪರಿಸ್ಥಿತಿ ಮ್ಯಾನ್ಮಾರ್‌ನ ರೊಹಿಂಗ್ಯಾ ಮುಸ್ಲಿಮರ ಹಾಗೆ ದುರಂತಮಯವಾದ ಅಂತ್ಯ ಕಾಣುವುದರಲ್ಲಿ ಸಂಶಯವಿಲ್ಲ. ಮನುವಾದಿಗಳಿಂದ ತುಳಿತಕ್ಕೊಳಗಾದ ಇತಿಹಾಸವನ್ನು ದಲಿತರು ಹೊಂದಿದ್ದಾರೆ. ಆದರೆ ಅವರಲ್ಲಿನ ಕೆಲವರು ಮನುವಾದಿಗಳ ಜೊತೆ ಸೇರುತ್ತಿರುವಂಥ ಭಯಾನಕ ಪರಿಸ್ಥಿತಿ ದೇಶಾದ್ಯಂತ ಉಂಟಾಗುತ್ತಿದೆ. ಕ್ರಾಂತಿಕಾರಿ ದಲಿತ ನಾಯಕರೆನಿಸಕೊಂಡಂಥ ಅಠವಳೆ, ರಾಮ್ ವಿಲಾಸ್ ಪಾಸ್ವಾನ್ ಅಂಥವರು ಮನುವಾದಿಗಳ ಗುಲಾಮರಾದದ್ದು ಈಗ ಇತಿಹಾಸ. ಎಂ.ಜೆ. ಅಕ್ಬರ್ ಅಂಥ ಅಲ್ಪಸಂಖ್ಯಾತ ಬುದ್ಧಿಜೀವಿಗಳು ಮತ್ತು ಮಧು ಕಿಶ್ವರ್ ಅಂಥ ಉದಾರವಾದಿ ಹಿಂದುಗಳು ನಮ್ಮ ಕಣ್ಣಮುಂದೆಯೆ ಮನುವಾದಿಗಳ

ಸೇವಕರಾದರು. ಬಿಹಾರ ಮುಖ್ಯಮಂತ್ರಿ ನಿತೀಶ್ ಕುಮಾರ್, ಬಹುಜನ ಸಮಾಜ ಪಕ್ಷದ ಅಧ್ಯಕ್ಷೆ ಮಾಯಾವತಿ ಮತ್ತು ಜೆ.ಡಿ.ಎಸ್ ಪಕ್ಷದ ಅಧ್ಯಕ್ಷ ಕುಮಾರಸ್ವಾಮಿ ಅವರ ಬಗ್ಗೆ ಹೇಳುವಂತದ್ದೇನಿಲ್ಲ. ಲಿಂಗಾಯತರಲ್ಲಿ ಕೋಮುವಾದಿಗಳ ಕಡೆಗೆ ವಾಲುವವರೂ ಇದ್ದಾರೆ. ಆದರೆ ಶೂದ್ರರು ಮತ್ತು ಪಂಚಮರೂ ಸೇರಿದಂತೆ ಒಟ್ಟಾರೆ ಹಿಂದೂಗಳಲ್ಲಿ ಬಹುಸಂಖ್ಯಾತರು ಉದಾರವಾದಿಗಳಾಗಿರುವುದರಿಂದಲೇ ದೇಶದಲ್ಲಿ ಪ್ರಜಾಪ್ರಭುತ್ವ ಉಳಿದುಕೊಂಡಿದೆ ಎಂಬುದನ್ನು ಮುಸ್ಲಿಮರು ಮತ್ತು ಕ್ರೈಸ್ತರು ಮುಂತಾದ ಅಲ್ಪಸಂಖ್ಯಾತರು ಮರೆಯಬಾರದು.

ಇತರ ವಿಚಾರವಾದಿಗಳ ಮಾರ್ಗದರ್ಶನಲ್ಲಿ ದಲಿತ ಮುಸ್ಲಿಂ ಸಮಾಜಗಳ ಪ್ರಜ್ಞಾವಂತರು ರಾಜಕೀಯವಾಗಿ ಒಂದಾಗಿ ಚುನಾವಣೆಯ ವೇಳೆಯಲ್ಲಿ ಅಷ್ಟೇ ಅಲ್ಲದೆ ಸಮಾಜಿಕ ನ್ಯಾಯದ ಹೋರಾಟಗಳಲ್ಲಿ ಕೂಡ ಭಾಗವಹಿಸುವುದು ಅವಶ್ಯವಾಗಿದೆ. ಕೋಮುವಾದಿಗಳು ದಲಿತ, ಮುಸ್ಲಿಂ, ಕ್ರಿಶ್ಚಿಯನ್ ಧರ್ಮದವರನ್ನು, ಎಡಪಂಥೀಯರನ್ನು ಮತ್ತು ಇತರೆ ವಿಚಾರವಾದಿಗಳನ್ನು ತಮ್ಮ ವಿರೋಧಿಗಳೆಂದೇ ಭಾವಿಸಿದ್ದಾರೆ. ಇವರೆಲ್ಲರೂ ಒಂದಾಗುವುದಕ್ಕೆ ಇದು ಕೂಡ ಪ್ರಬಲ ಕಾರಣವಾಗಬೇಕಿದೆ.

ಮುಸ್ಲಿಂ ಮಹಿಳೆಯರ ಮತಗಳನ್ನು ಕಬಳಿಸುವ ಹುನ್ನಾರವನ್ನೂ ಕೋಮುವಾದಿಗಳು ಮಾಡುತ್ತಿದ್ದಾರೆ. ಎಲ್ಲ ತಂತ್ರ ಮತ್ತು ಕುತಂತ್ರಗಳೊಂದಿಗೆ ಕೋಮುವಾದಿಗಳು ಚುನಾವಣೆಯಲ್ಲಿ ಗೆದ್ದು ಸರ್ಕಾರ ರಚಿಸುವ ಗುರಿ ಹೊಂದಿದ್ದಾರೆ. ಇಂಥ ಸಂದರ್ಭದಲ್ಲಿ ಎಲ್ಲ ಮುಸ್ಲಿಂ ಪಂಗಡಗಳು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾದರೂ ಒಂದಾಗುವುದು ಅವಶ್ಯವಾಗಿದೆ. ಈ ಪಂಗಡಗಳು ರಾಜಕೀಯವಾಗಿ ಮತ್ತು ಸೈದ್ಧಾಂತಿಕವಾಗಿ ತಮ್ಮದೇ ಆದಂಥ ವಿಚಾರಧಾರೆಯನ್ನು ಹೊಂದಿವೆ. ಆದರೆ ಕೋಮುವಾದ ವಿರೋಧಿ ನೆಲೆಯಲ್ಲಿ ಒಂದಾಗದಿದ್ದರೆ 'ನಮಗೆ ಮುಸ್ಲಿಮರ ಮತಗಳು ಬೇಡವೆ ಬೇಡ' ಎಂದು ಹೇಳಿ ಸಮಾಜವನ್ನು ಒಡೆದಾಳುವವರಿಗೆ ರಾಜ್ಯವನ್ನು ಮತ್ತು ಇಡೀ ದೇಶವನ್ನು ಬಿಟ್ಟುಕೊಡುವುದರಲ್ಲಿ ಸಂಶಯವಿಲ್ಲ.

**ಮೂಲನಿವಾಸಿಗಳು**

ಹಿಂದುಧರ್ಮ ಎನ್ನುವುದು ನಿಜವಾದ ಅರ್ಥದಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರ ಧರ್ಮವಾಗಿದೆ. ಉಳಿದ ಶೇಕಡಾ 90 ರಷ್ಟು ಶೂದ್ರರು ಮತ್ತು ದಲಿತರು ಮೂಲನಿವಾಸಿಗಳಾಗಿದ್ದು ವಿವಿಧ ಜಾತಿ, ಉಪಜಾತಿಗಳಲ್ಲಿ ಒಡೆದು ಹೋಗಿದ್ದಾರೆ. ಇವರನ್ನೆಲ್ಲ ತಮ್ಮ ಅಧೀನದಲ್ಲಿ ತರಲು ಕೋಮುವಾದಿಗಳು ಒಂದು ಯೋಜನೆಯನ್ನು ರೂಪಿಸಿದ್ದಾರೆ. ದಲಿತರೂ ಸೇರಿದಂತೆ ಎಲ್ಲ ಶೂದ್ರರು ತಾವು ಹಿಂದುಗಳೆಂದು ಭಾವಿಸುವುದು ಕೋಮುಗಲಭೆಗಳಲ್ಲಿ ಮಾತ್ರ. ಇಂಥ ಸ್ಥಿತಿಯಲ್ಲಿ ಮುಸ್ಲಿಮರು ಕ್ರೈಸ್ತರು ಮುಂತಾದವರು ಸಹಜವಾಗಿಯೆ ಹೊರಗೆ ಉಳಿಯುವರು. ಆಗ ಅವರ ಜೊತೆ ಇರುವವರು ಸಮತಾವಾದಿಗಳು, ಉದಾರವಾದಿ

ಸವರ್ಣೀಯರು, ಹೋರಾಟದಲ್ಲಿ ನಂಬಿಕೆ ಇರುವ ದಲಿತರು ಮತ್ತು ಇತರ ಶೂದ್ರರು ಎಂಬುದನ್ನು ಮುಸ್ಲಿಮರು ಬೇಗನೆ ಅರಿತುಕೊಂಡಷ್ಟು ಒಳ್ಳೆಯದು.

ಇದರಿಂದ ಎರಡೂ ಕಡೆಯ ಜನಸಾಮಾನ್ಯರಿಗೆ ತೊಂದರೆಯಾಗಿ ಬಂಡವಾಳಶಾಹಿಗಳಿಗೆ ಮತ್ತು ಅವರ ಹಿಂಬಾಲಕರಿಗೆ ಲಾಭವಾಗುವುದು. ಆದರೆ ಎಲ್ಲ ಜಾತಿ ಮತ್ತು ಧರ್ಮಗಳ ಜನಸಾಮಾನ್ಯರಲ್ಲಿ ಅನೇಕರು ಮೂಢನಂಬಿಕೆ ಮತ್ತು ರಾಜಕೀಯ ಅಜ್ಞಾನದ ಕಾರಣ ಕೋಮುವಾದಿಗಳ ಮತ್ತು ಮೂಲಭೂತವಾದಿಗಳ ಆಕರ್ಷಣೆಗೆ ಒಳಗಾಗುತ್ತಿದ್ದಾರೆ. ಕೋಮುವಾದಿಗಳ ದಬ್ಬಾಳಿಕೆಯ ವಿರುದ್ಧ ದಲಿತರ ಹಾಗೆ ಹೋರಾಟ ಮಾಡುವಂಥ ವಾತಾವರಣ ಅಲ್ಪಸಂಖ್ಯಾತರಿಗೆ ಇಲ್ಲ. ಮುಸ್ಲಿಮರು ಅಭಿವ್ಯಕ್ತಿ ಸ್ವಾತಂತ್ರ್ಯ ಕಳೆದುಕೊಂಡಿದ್ದಾರೆ ಎನ್ನುವುದಕ್ಕೆ ಅನೇಕ ಘಟನೆಗಳು ಸಾಕ್ಷಿ ಇವೆ. ಕೋಮುವಾದಿಗಳ ವಿರುದ್ಧ ಮಾತನಾಡಿದ ತಕ್ಷಣವೇ ಮುಸ್ಲಿಮರು ದೇಶದ್ರೋಹಿಗಳೆಂದು ಅನುಮಾನಿಸುವಂಥ ವಾತಾವರಣ ಸೃಷ್ಟಿಯಾಗಿದೆ.

ಪತ್ರಿಕೆ ಮತ್ತು ಟಿ.ವಿ.ಗಳ ಮೂಲಕ ಕೋಮುವಾದಿಗಳು ಸುಳ್ಳುಗಳನ್ನು ಸೃಷ್ಟಿಸುತ್ತ ದ್ವೇಷ ಸಂಸ್ಕೃತಿಯನ್ನು ಎಷ್ಟೊಂದು ಪ್ರಖರವಾಗಿ ಹಬ್ಬಿಸುತ್ತಿದ್ದಾರೆ ಎಂದರೆ, ಮುಂದೊಂದು ದಿನ ಕೋಮುವಾದಿ ನಾಯಕರು ಹಿಟ್ಲರ್‌ನನ್ನೂ ಮೀರಿಸುವ ಸಾಧ್ಯತೆಗಳಿವೆ.

ಈ ಹಿನ್ನೆಲೆಯಲ್ಲಿ ಮುಸ್ಲಿಮರು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯದ ಉಳುವಿಗಾದರೂ ಧರ್ಮದ ಹೆಸರಲ್ಲಿ ವೋಟು ಕೇಳದ ಮತ್ತು ಕೋಮುವಾದಿಗಳನ್ನು ವಿರೋಧಿಸುವ ಪಕ್ಷಗಳ ಜೊತೆ ಗುರುತಿಸಿಕೊಳ್ಳಬೇಕು. ಇಲ್ಲದಿದ್ದರೆ ಕೋಮುವಾದಿಗಳು ಧರ್ಮರಾಜಕಾರಣದ ಹೆಸರಿನಲ್ಲಿ ಎಲ್ಲ ಜಾತಿಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡನಂತರ ನಮ್ಮ ಸಂವಿಧಾನವನ್ನು ಕಡೆಗಣಿಸಿ ಮನುವಾದಿ ವ್ಯವಸ್ಥೆಯನ್ನು ಜಾರಿಗೊಳಿಸುವುದರಲ್ಲಿ ಸಂಶಯವಿಲ್ಲ. ಆಗ ಅಲ್ಪಸಂಖ್ಯಾತರು, ದುರ್ಬಲ ಶೂದ್ರರು ಮತ್ತು ದಲಿತರು ನಾಲ್ಕನೇ ದರ್ಜೆ ಪ್ರಜೆಗಳಾಗಿ ಬದುಕಬೇಕಾಗುವುದು.

ಮೂಲನಿವಾಸಿಗಳು ಮನುವಾದಿ ವ್ಯವಸ್ಥೆಯನ್ನು ಪ್ರತಿಭಟಿಸುತ್ತಲೇ ಬಂದಿದ್ದಾರೆ. ಆರಂಭದಲ್ಲಿ ದೇಶದ ಮೂಲನಿವಾಸಿಗಳು ಜೈನಧರ್ಮ ಸ್ವೀಕರಿಸಿದರು. ನಂತರದವರು ಬೌದ್ಧಧರ್ಮ ಸ್ವೀಕರಿಸಿದರು. ಮುಂದಿನ ದಿನಗಳಲ್ಲಿ ಕ್ರೈಸ್ತ, ಇಸ್ಲಾಂ, ಲಿಂಗಾಯತ, ಸಿಖ್ ಧರ್ಮಗಳನ್ನು ಸ್ವೀಕರಿಸಿದರು. ಇವರೆಲ್ಲರ ಹೃದಯದಲ್ಲಿ ಮೂಲನಿವಾಸಿಗಳ ರಕ್ತವೂ ಹರಿಯುತ್ತಿದೆ. ಮತಾಂತರಗೊಳ್ಳದ ಎಸ್ಸಿ, ಎಸ್ಟಿ, ಒಬಿಸಿ ಮತ್ತು ಇತರ ಶೂದ್ರರು ಮೂಲನಿವಾಸಿಗಳಾಗಿಯೆ ಉಳಿದಿದ್ದಾರೆ. ಮತಾಂತರಗೊಂಡ ಮೂಲನಿವಾಸಿಗಳು ಮತ್ತು ಹಾಗೇ ಉಳಿದ ಮೂಲನಿವಾಸಿಗಳು ಒಂದಾಗಿ ದೇಶದ ಪ್ರಜಾಪ್ರಭುತ್ವ ಮತ್ತು ಸಂವಿಧಾನವನ್ನು ಉಳಿಸುವ ಮೂಲಕ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದು ಕಾಲದ ಕರೆಯಾಗಿದೆ.

## ಸಾಮ್ರಾಜ್ಯಗಳು ಸಂಸ್ಥಾನಗಳು ಮತ್ತು ಯುದ್ಧಗಳು

ಭಾರತದಲ್ಲಿ 550ಕ್ಕೂ ಹೆಚ್ಚು ಸಂಸ್ಥಾನಗಳು ಮತ್ತು ಸಾಮ್ರಾಜ್ಯಗಳು ಇದ್ದವು. ಇವೆಲ್ಲ ತಮ್ಮೊಳಗೇ ಯುದ್ಧ ಮಾಡುತ್ತಿದ್ದವು. ಅವುಗಳ ಭೂಪಟ ಬದಲಾಗುತ್ತಲೇ ಇತ್ತು. ಅಶೋಕ ಮತ್ತು ಕಳಿಂಗ ಯುದ್ಧ, ಪುಲಿಕೇಶಿ ಮತ್ತು ಹರ್ಷವರ್ಧನ, ಕಿತ್ತೂರು ಮತ್ತು ಪಣೆಯ ಪೇಶ್ವೆಯರು, ಬೆಳವಡಿ ಮಲ್ಲಮ್ಮ ಮತ್ತು ಶಿವಾಜಿ, ಬಹಮನಿಗಳು ಮತ್ತು ಆದಿಲಶಾಹಿಗಳು, ಮೊಘಲರು ಮತ್ತು ಆದಿಲಶಾಹಿಗಳು ಮುಂತಾದ ನೂರಾರು ಉದಾಹರಣೆಗಳು ಭಾರತದ ಚರಿತ್ರೆಯಲ್ಲಿ ಸಿಗುತ್ತವೆ. ಹಿಂದುಗಳು ಹಿಂದುಗಳೊಡನೆ ಹಾಗೂ ಮುಸ್ಲಿಮರು ಮುಸ್ಲಿಮರೊಡನೆ ಕೂಡ ಯುದ್ಧ ಮಾಡುತ್ತಲೇ ಬಂದಿದ್ದಾರೆ.

ನಾವಿಂದು ನೋಡುವ ಭಾರತ ದೇಶಕ್ಕೆ ಕೇವಲ 77 ವರ್ಷಗಳಾಗಿವೆ. ಮೂಲನಿವಾಸಿಗಳೂ ಸೇರಿದಂತೆ ಅನೇಕ ಜನಾಂಗಗಳು, ಧರ್ಮಗಳು, ಜಾತಿ, ಉಪಜಾತಿಗಳು, ಆದಿವಾಸಿಗಳು, ಅಲೆಮಾರಿಗಳು ಮತ್ತು ಅವರ ಸಂಸ್ಕೃತಿಗಳ ಜೊತೆ ವಿಭಿನ್ನ ಪ್ರಾದೇಶಿಕತೆಗಳ ಜೀವನವಿಧಾನಗಳು ಕೂಡಿ ನವಭಾರತದ ನಿರ್ಮಾಣವಾಗಿದೆ. ಪ್ರಜಾಪ್ರಭುತ್ವದ ನೆಲೆಗಟ್ಟಿನಲ್ಲಿ ಗಣರಾಜ್ಯವಾಗಿ ಒಂದು ಸಾರ್ವಭೌಮ ದೇಶವಾಗಿದೆ. ಇವರೆಲ್ಲರ ಸಂಸ್ಕೃತಿಗಳ ಮಿಲನದಿಂದ ವಿಶಿಷ್ಟವಾದ ಭಾರತೀಯ ಸಂಸ್ಕೃತಿ ರೂಪುಗೊಂಡಿದೆ. ಈ ಬಹುತ್ವ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಮೂಲಕ ದೇಶವನ್ನು ಮುನ್ನಡೆಸದಿದ್ದರೆ ಧರ್ಮದ ಹೆಸರಿನಲ್ಲಿ ಕೋಮುವಾದಿ ಫ್ಯಾಸಿಸ್ಟರು ದೇಶವನ್ನು ಅಧೋಗತಿಗೆ ಒಯ್ಯುವುದರಲ್ಲಿ ಸಂಶಯವಿಲ್ಲ.

## ಮನುಸಂಸ್ಕೃತಿಗೆ ಪ್ರತಿಯಾದ ಬಸವಸಂಸ್ಕೃತಿ

"ಧರ್ಮಸ್ಯ ಬ್ರಾಹ್ಮಣೋ ಮೂಲಮಗ್ರಂ ರಾಜನ್ಯ ಉಚ್ಚತೇ" (ಬ್ರಾಹ್ಮಣನು ಧರ್ಮದ ಮೂಲವಾದರೆ ರಾಜನು ಅದರ ತುದಿ.) ಎಂದು ಮನುಸ್ಮೃತಿಯ 11ನೇ ಅಧ್ಯಾಯದ 83ನೇ ಶ್ಲೋಕ ಹೇಳುತ್ತದೆ.

ಧರ್ಮವೃಕ್ಷಕ್ಕೆ ಬ್ರಾಹ್ಮಣನೇ ಮೂಲ. ಧರ್ಮವೃಕ್ಷ ಜೀವಂತವಾಗಿರಬೇಕಾದರೆ ಬ್ರಾಹ್ಮಣರನ್ನು ಎಲ್ಲರೀತಿಯಿಂದಲೂ ಚೆನ್ನಾಗಿ ನೋಡಿಕೊಳ್ಳಬೇಕು. ರಾಜನು ಈ ಧರ್ಮವೃಕ್ಷದ ತುದಿಯಲ್ಲಿದ್ದಾನೆ. ಆತ ಉಳಿಯಬೇಕಾದರೆ ಬ್ರಾಹ್ಮಣ ರಕ್ಷಣೆ ಮಾಡಬೇಕು. ಬ್ರಾಹ್ಮಣರನ್ನು ಸಮಾಜ ಕಡೆಗಣಿಸಿದರೆ ರಾಜನೂ ಉಳಿಯುವುದಿಲ್ಲ, ಸಮಾಜವೂ ಉಳಿಯುವುದಿಲ್ಲ. ಧರ್ಮಗ್ಲಾನಿಯಾಗಿ ಸರ್ವವೂ ನಾಶವಾಗುತ್ತದೆ. ಆದ್ದರಿಂದ ಬ್ರಾಹ್ಮಣ ರಕ್ಷಣೆಯೆ ಧರ್ಮ ರಕ್ಷಣೆ. ಇದುವೆ ರಾಜಧರ್ಮ ಎಂದು ಮನುಸ್ಮೃತಿ ಸೂಚಿಸುತ್ತದೆ.

ಹೀಗೆ ಮನು ರಾಜ್ಯಶಕ್ತಿಯನ್ನು ಧರ್ಮಶಕ್ತಿಯಿಂದ ಬಂಧಿಸಬಯಸುತ್ತಾನೆ. ಆ ಮೂಲಕ 'ಚಾತುರ್ವರ್ಣ ರಕ್ಷಿಸುತ್ತ ಬ್ರಾಹ್ಮಣ ಸೇವೆ ಮಾಡುವುದೇ ರಾಜಧರ್ಮ'

ಎಂದು ಸೂಚಿಸುತ್ತಾನೆ. ಈ ರಹಸ್ಯವನ್ನು ಬುದ್ಧ ಬಸವರು ಭೇದಿಸಿದರು. ಅಂತೆಯೆ ಮನುವಾದಿ ವ್ಯವಸ್ಥೆ ಬೌದ್ಧರ ಮತ್ತು ಶರಣರ ಕೊಲೆ ಮಾಡಿತು. ಅವರ ಸಾಹಿತ್ಯವನ್ನು ಸುಟ್ಟುಹಾಕಿತು. ಬೌದ್ಧರು ಈ ಷಡ್ಯಂತ್ರವನ್ನು ಅರ್ಥ ಮಾಡಿಕೊಂಡರು. ಆದರೆ ಬಹುಪಾಲು ಲಿಂಗಾಯತರು ತಮ್ಮ ಚಾರಿತ್ರಿಕ ಅವಜ್ಞೆಯಿಂದಾಗಿ ಬ್ರಾಹ್ಮಣಶಾಹಿಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಸೋತರು.

ಅದೇನೇ ಇದ್ದರೂ ರಾಜಕಾರಣದಲ್ಲಿ ಧರ್ಮದ ಪಾತ್ರ ಗೌಣವಾಗಿದೆ ಎಂಬುದಕ್ಕೆ ದೇಶದ ಚರಿತ್ರೆಯೆ ಸಾಕ್ಷಿಯಾಗಿದೆ. ಧರ್ಮ ಧರ್ಮಗಳ ಮಧ್ಯೆ ಯುದ್ಧಗಳಾಗಿವೆ. ಒಂದೇ ಧರ್ಮದವರ ಮಧ್ಯೆ ಯುದ್ಧಗಳಾಗಿವೆ. ಮಾನವನ ಇತಿಹಾಸ ರಕ್ತಸಿಕ್ತವಾಗಿದೆ. "ವಸುಧೈವ ಕುಟುಂಬಕಂ" (ವಿಶ್ವವೇ ಒಂದು ಕುಟುಂಬ) ಎಂಬ ಧರ್ಮಮೌಲ್ಯ ಎಲ್ಲಿ ಹೋಯಿತು? "ಜಗತ್ತಿನ ಎಲ್ಲರ ಮೇಲೆಯೂ ಅನುಕಂಪವಿರಲಿ, ಸ್ವರ್ಗಗಳ ಒಡೆಯನು ನಿಮ್ಮ ಮೇಲೆ ಅನುಕಂಪ ತೋರುವನು" ಎಂದು ಪೈಗಂಬರರು ಹೇಳಿದ ಧರ್ಮಮೌಲ್ಯ ಎಲ್ಲಿ ಹೋಯಿತು? ಧರ್ಮ ಪಾಲನೆ ಮಾಡುವ ಹಿಂದೂಗಳು ಮತ್ತು ಮುಸ್ಲಿಮರೂ ಇದ್ದಾರೆ. ಆದರೆ ಅವರ ಮಾತು ಕೇಳುವವರಾರು?

ಬಸವಣ್ಣನವರು "ದಯೆಯೆ ಧರ್ಮದ ಮೂಲ" ಎಂದು ಹೇಳುತ್ತಾರೆ.

"ಮರಕ್ಕೆ ಬೇರು ಬಾಯಿಯೆಂದು ತಳಕ್ಕೆ ನೀರನೆರೆದಡೆ ಮೇಲೆ ಪಲ್ಲವಿಸಿತ್ತು ನೋಡಾ. ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ ಮುಂದೆ ಸಕಲ ಪದಾರ್ಥವನೀವನು." ಎಂದು ತಿಳಿಸುತ್ತಾರೆ.

'ಬ್ರಾಹ್ಮಣನೇ ಧರ್ಮದ ಮೂಲ' ಎಂದು ಮನು ಹೇಳಿದರೆ, 'ಜೀವಕಾರುಣ್ಯವೇ ಧರ್ಮದ ಮೂಲ' ಎಂದು ಬಸವಣ್ಣನವರು ಹೇಳುತ್ತಾರೆ. 'ಧರ್ಮದ ತುದಿ ರಾಜ' ಎಂದು ಮನು ಹೇಳಿದರೆ, 'ಜಂಗಮವೇ (ಸಮಾಜವೇ) ಧರ್ಮದ ತುದಿ' ಎಂದು ಬಸವಣ್ಣನವರು ಹೇಳುತ್ತಾರೆ. ಲಿಂಗದ ಬಾಯಿ ಸಮಾಜ ಎಂದು ಸಾರುತ್ತಾರೆ.

ಬ್ರಾಹ್ಮಣರು ಮತ್ತು ರಾಜರು ಸುಖವಾಗಿರಬೇಕೆಂಬುದೇ ಮನುಸ್ಮೃತಿಯ ಆಶಯವಾಗಿದೆ. ಜೀವಕಾರುಣ್ಯದಿಂದ ಕೂಡಿದ ಸಮಾಜ ಸುಖವಾಗಿರಬೇಕು. ಇದುವೇ ದೇವರನ್ನು ತೃಪ್ತಿಗೊಳಿಸುವ ಕ್ರಮ ಎಂದು ಬಸವಣ್ಣನವರು ಹೇಳುವಾಗ ಬ್ರಾಹ್ಮಣ ಮತ್ತು ರಾಜನನ್ನು ತಮ್ಮ ಚಿಂತನೆಯ ಹೊರಗೆ ಇಡುತ್ತಾರೆ. ಜನಮುಖಿ ಧರ್ಮದಲ್ಲಿ ಎಲ್ಲರೂ ಸುಖವಾಗಿರಬೇಕು. ಇಡೀ ಸಮಾಜ ಸುಖವಾಗಿರಬೇಕು. ಆ ಸಮಾಜದ ಭಾಗವಾಗಿ ಬ್ರಾಹ್ಮಣರು ಮತ್ತು ರಾಜರು ಇರಬೇಕು ಎಂದು ಬಸವಣ್ಣನವರು ಸೂಚಿಸುತ್ತಾರೆ.

ಹೀಗೆ ಮನುಸಂಸ್ಕೃತಿಗೆ ಪರ್ಯಾಯವಾಗಿ ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಬಸವ ಸಂಸ್ಕೃತಿ ಹುಟ್ಟಿಕೊಂಡಿದೆ. ಮನುಸಂಸ್ಕೃತಿ ಶೋಷಕರ ಸಂಸ್ಕೃತಿಯಾಗಿದೆ. ಬಸವಸಂಸ್ಕೃತಿ ದುಡಿಯುವ ವರ್ಗದವರ ಸಮಾನತೆಯ ಸಂಸ್ಕೃತಿಯಾಗಿದೆ.

**ಭಕ್ತಿಪಂಥ**

ದೇಶದಲ್ಲಿ 6 ಲಕ್ಷಕ್ಕೂ ಹೆಚ್ಚು ಹಳ್ಳಿಗಳಿವೆ. ಪ್ರತಿಯೊಂದು ಹಳ್ಳಿಯಲ್ಲಿ ಭಕ್ತಿಪಂಥದ ಸೂಫಿ, ಶರಣ, ದಾಸ, ಸಂತ ಮತ್ತು ಅನುಭಾವಿಗಳ ಪೈಕಿ ಒಬ್ಬರ ಸಮಾಧಿಯಾದರೂ ಇದ್ದೇ ಇರುತ್ತದೆ. ಭಾರತದ ಜನತೆಯ ಮೇಲೆ ಭಕ್ತಿಪಂಥ ಪ್ರಭಾವ ಬೀರಿದಷ್ಟು ಇನ್ನಾವುದೂ ಪ್ರಭಾವ ಬೀರಿಲ್ಲ. ಭಕ್ತಿಪಂಥ ಜಾತಿಭೇದ ಮಾಡುವುದಿಲ್ಲ. ಯಾರನ್ನೂ ಕೀಳಾಗಿ ನೋಡುವುದಿಲ್ಲ. ಸೂಫಿ ಸಂತರ ಸಮಾಧಿಗಳಾದ ದರ್ಗಾಗಳಂತೂ ಭಾವೈಕ್ಯದ ಕೇಂದ್ರಗಳಾಗಿವೆ. ದಲಿತರು, ಹಿಂದುಳಿದವರು, ಮುಂದುವರಿದವರು ಯಾರೇ ಇರಲಿ ಅವರಿಗೆ ದರ್ಗಾಗಳಲ್ಲಿ ಸಮಾನವಾದ ಸ್ಥಾನವಿದೆ.

ಸೂಫಿಗಳು ಎಂದೂ ಮತಾಂತರ ಮಾಡಲು ಹೋಗಲಿಲ್ಲ. ಆದರೆ ಎಲ್ಲ ಧರ್ಮ ಮತ್ತು ಜಾತಿಗಳವರು ಅವರ ಶಿಷ್ಯರಾದರು. ಖ್ವಾಜಾ ಅಮೀನುದ್ದೀನ ಆಲಾ ಅವರ ಪರಮಶಿಷ್ಯ ಶಿರಹಟ್ಟಿಯ ಫಕೀರಸ್ವಾಮಿ. ಗೋಗಿಯ ಚಂದಾಹುಸೇನಿಯ ಆತ್ಮೀಯ ಸಂಗಾತಿ ಡಿಗ್ಗಿ ಸಂಗಮೇಶ್ವರ. ಗುಲಬರ್ಗಾದ ಖ್ವಾಜಾ ಬಂದಾನವಾಜರ ಆತ್ಮೀಯ ಸಂಗಾತಿ ಸಿದ್ದಪ್ಪಜ್ಜ. ಇಂಥ ಸೂಫಿ ಶರಣರ ಸಂಗಮವಾಗಿ ಕೊಡೆಕಲ್‌ನಲ್ಲಿ ಹೊಸದೊಂದು ಚಿಂತನಾವಿಧಾನವನ್ನು ಕೊಡೆಕಲ್ ಬಸವಣ್ಣನವರು ಪ್ರಾರಂಭಿಸಿದರು. ಅದು ಕೊಡೆಕಲ್ ಸಂಪ್ರದಾಯ ಎಂದು ಪ್ರಸಿದ್ಧವಾಗಿದೆ. ತಿಂಥಣಿ ಮೋನೇಶ್ವರ, ಶಿರಹಟ್ಟಿ ಫಕೀರಸ್ವಾಮಿ, ಸಾವಳಗಿ ಶಿವಲಿಂಗೇಶ್ವರ ಮುಂತಾದವರು ಈ ಸಂಪ್ರದಾಯಕ್ಕೆ ಸೇರಿದವರು.

ನಮ್ಮ ಗ್ರಾಮೀಣ ಜನರು ಇಂದಿಗೂ ಹಿಂದು ಮುಸ್ಲಿಂ ಹಬ್ಬಗಳನ್ನು ಒಟ್ಟಿಗೇ ಆಚರಿಸುತ್ತಾರೆ. ಅವರಿಗೆ ಗಣಪತಿ, ಮೊಹರಂ, ನಾಡಹಬ್ಬ, ದುರಗವ್ವ, ದ್ಯಾಮವ್ವ, ಮರಗವ್ವ ಎಲ್ಲ ಅಷ್ಟೇ. ಅವರಿಗೆ ಭೇದಸಂಸ್ಕೃತಿ ಗೊತ್ತಿದ್ದಿದ್ದಿಲ್ಲ.

ನಾವೀಗ ಬದುಕುತ್ತಿರುವುದು ಹಿಂದಿನ ನೂರಾರು ಭಾರತಗಳ ಭಾರತವಲ್ಲ; ಪ್ರಜಾಪ್ರಭುತ್ವವಾದಿ ನೆಲೆಯಲ್ಲಿ ತಲೆ ಎತ್ತಿದ ಗಣರಾಜ್ಯ ಭಾರತದಲ್ಲಿ. ನಮ್ಮ ನಮ್ಮ ಧರ್ಮಗಳು ನಮಗೆ ಒಳ್ಳೆಯವೆ. ಅವುಗಳನ್ನು ನಮ್ಮ ಮನೆಗಳಲ್ಲಿ ಮತ್ತು ನಮ್ಮ ಧಾರ್ಮಿಕ ವಲಯಗಳಲ್ಲಿ ಆಚರಿಸುವುದನ್ನು ಮೊದಲು ಕಲಿಯಬೇಕು. ನಮ್ಮ ನಮ್ಮ ಧರ್ಮಗ್ರಂಥಗಳು ನಮಗೆ ಪವಿತ್ರವಾಗಿವೆ. ಅವುಗಳನ್ನು ಬೀದಿಗೆ ತಂದು ಅವಮಾನ ಮಾಡಬಾರದು ಮತ್ತು ಅವುಗಳ ಪಾವಿತ್ರ್ಯವನ್ನು ಕೆಡಿಸಬಾರದು. ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವವಿದೆ. ಅದು ನಮ್ಮೆಲ್ಲರ ಸಮೂಹಿಕ ಧರ್ಮ ಎಂದು ಭಾವಿಸಬೇಕು. ನಮ್ಮ ದೇಶಕ್ಕೆ ಸಂವಿಧಾನವಿದೆ. ಅದು ನಮ್ಮೆಲ್ಲರ ಪವಿತ್ರ ಗ್ರಂಥ ಎಂಬುದನ್ನು ಮರೆಯಬಾರದು. ಅದು ನಮ್ಮ ಮಾನವಹಕ್ಕುಗಳನ್ನು ಎತ್ತಿ ಹಿಡಿದು; ನಮ್ಮ ನಮ್ಮ ಧರ್ಮಗಳನ್ನು ಮತ್ತು ಧರ್ಮಗ್ರಂಥಗಳನ್ನು ರಕ್ಷಿಸುವ ಸಾಮರ್ಥ್ಯ ಹೊಂದಿದೆ. ಬುದ್ಧ, ಬಸವ ಮುಂತಾದ ಮಹಾಪುರಷರ ಚಿಂತನಾಕ್ರಮ

ಮತ್ತು ಅಂಬೇಡ್ಕರರ ಪ್ರತಿಭೆಯನ್ನು ನಮ್ಮ ಸಂವಿಧಾನ ಹೊಂದಿದೆ ಎಂಬುದನ್ನು ಮರೆಯಬಾರದು.

'ನಮ್ಮೆಲ್ಲರ ಹಿತವನ್ನು ಕಾಪಾಡುವ ಶಕ್ತಿ ನಮ್ಮ ಪ್ರಜಾಪ್ರಭುತ್ವದಲ್ಲಿ ಮತ್ತು ನಮ್ಮ ಸಂವಿಧಾನದಲ್ಲಿ ಇದೆ' ಎಂಬ ಸತ್ಯದ ಅರಿವಾದಾಗ ಬಹುಸಂಸ್ಕೃತಿ ಮತ್ತು ಭಾವೈಕ್ಯ ಎಂದೂ ಘಾಸಿಯಾಗಲು ಸಾಧ್ಯವಿಲ್ಲ.

ನವಭಾರತ ತನ್ನ ಎಲ್ಲ ಹಿಂದಣ ಹೆಜ್ಜೆಗಳಲ್ಲಿನ ತಪ್ಪು ಹೆಜ್ಜೆಗಳನ್ನು ಮರೆತು ಯೋಗ್ಯ ಹೆಜ್ಜೆಗಳ ನೆನಪುಗಳೊಂದಿಗೆ ಮುಂದುವರಿಯಬೇಕು. ಹಿಂದೂ ಮುಸ್ಲಿಂ ಮುಂತಾದ ರಾಜರುಗಳು ಮಾಡಿದ ತಪ್ಪನ್ನು ಇಂದಿನ ಹಿಂದು ಮುಸ್ಲಿಂ ಪೀಳಿಗೆಗಳ ತಲೆಗೆ ಕಟ್ಟಬಾರದು. ನಮ್ಮ ನೈಸರ್ಗಿಕ ಸಂಪತ್ತು, ಶಿಲ್ಪಕಲೆ, ಚಿತ್ರಕಲೆ, ಸಾಹಿತ್ಯ ಮತ್ತು ಸೌಹಾರ್ದ ಪರಂಪರೆಗೆ ಧರ್ಮಗಳ ತಳಕು ಹಾಕಬಾರದು. ಇವೆಲ್ಲವೂ ನಮ್ಮ ಪೂರ್ವಜರು ರಕ್ಷಿಸಿದ ಪ್ರತಿಭಾಪೂರ್ಣ ಬಳುವಳಿ ಎಂಬ ಸದ್ಭಾವನೆಯೊಂದಿಗೆ ಪರಸ್ಪರ ಸಹಾಕರದಿಂದ ಬದುಕುವುದೊಂದೇ ನಮ್ಮ ಮುಂದಿರುವ ಸಾಧ್ಯತೆ. ಇಲ್ಲದಿದ್ದರೆ ದುರಂತ ಕಟ್ಟಿಟ್ಟ ಬುತ್ತಿ.

**'ಇವನಾರವ' ಸಂಸ್ಕೃತಿ ಮತ್ತು 'ಇವ ನಮ್ಮವ' ಸಂಸ್ಕೃತಿ**

ಹಾಗೆ ನೋಡಿದರೆ ಜಗತ್ತಿನಲ್ಲಿ ಎರಡೇ ಸಂಸ್ಕೃತಿಗಳಿವೆ. ಒಂದು 'ಇವನಾರವ' ಸಂಸ್ಕೃತಿಯಾದರೆ ಇನ್ನೊಂದು 'ಇವ ನಮ್ಮವ' ಸಂಸ್ಕೃತಿ. ಮನುಸಂಸ್ಕೃತಿ ಮುಂತಾದವು 'ಇವನಾರವ' ಎಂಬ ಸಂಸ್ಕೃತಿಯವು. ಬುದ್ಧ, ಬಸವ ಮುಂತಾದ ಸಂಸ್ಕೃತಿಗಳು 'ಇವ ನಮ್ಮವ' ಎಂಬ ಸಂಸ್ಕೃತಿಯವು. ಮನುಸಂಸ್ಕೃತಿ ನಮ್ಮನ್ನು ಹೊರಗಿಡುವ ಸಂಸ್ಕೃತಿಯಾದರೆ ಬಸವ ಸಂಸ್ಕೃತಿ ನಮ್ಮೆಲ್ಲರನ್ನು ಒಳಗೊಳ್ಳುವ ಸಂಸ್ಕೃತಿ. ಅಸ್ಪೃಶ್ಯರು ಮೊದಲು ಮಾಡಿ ಎಲ್ಲ ಜಾತಿಜನಾಂಗಗಳಿಂದ ನಿರ್ಮಾಣವಾದ ಬಸವಸಂಸ್ಕೃತಿಯಿಂದ ಲಿಂಗಾಯತ ಧರ್ಮ ಜನ್ಮತಾಳಿದೆ. ತೆರೆದ ವಾತಾವರಣದಲ್ಲಿ ಮಾತ್ರ ಸಂಸ್ಕೃತಿ ಅರಳಲು ಸಾಧ್ಯ. ಜನಸಮುದಾಯಗಳು ಒಂದುಗೂಡಿದಾಗ ಸಾಂಸ್ಕೃತಿಕ ಸಂಬಂಧಗಳು ಸಹಜವಾಗಿಯೆ ಒಂದುಗೂಡುತ್ತ ಹೊಸ ಹೊಸ ಆಯಾಮಗಳನ್ನು ಪಡೆಯುತ್ತಲೇ ಇರುತ್ತವೆ. "ಮನುಷ್ಯ ಜಾತಿ ತಾನೊಂದೆ ವಲಂ" ಎಂಬ ಮಹಾಕವಿ ಪಂಪನ ಆಶಯವನ್ನು ಈಡೇರಿಸುತ್ತಲೇ ಇರುತ್ತವೆ. "ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನರಿಯಬಾರದು." ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ. ನಾವು ನಿಂತ ಕಾಲಘಟ್ಟವನ್ನು ಅರಿಯುವ ಉದ್ದೇಶದಿಂದಲೇ ಹಿಂದಿನ ಹೆಜ್ಜೆಗಳಲ್ಲಿನ ಕ್ರೌರ್ಯವನ್ನು ಗುರುತಿಸುವ ಪ್ರಯತ್ನವೇ ಈ ಲೇಖನದ ಉದ್ದೇಶವಾಗಿದೆ. ಇತಿಹಾಸದುದ್ದಕ್ಕೂ ಎಲ್ಲ ಜಾತಿ ಧರ್ಮಗಳ ಅಸಂಖ್ಯಾತ ಅಸಹಾಯಕರು ಉಳ್ಳವರ ಯುದ್ಧದಾಹಕ್ಕೆ ಬಲಿಯಾಗಿದ್ದಾರೆ. ಜನರೆಲ್ಲ ಒಂದಾಗಿ ಬದುಕುವುದರಲ್ಲೇ ಈ ಕ್ರೌರ್ಯಕ್ಕೆ ಉತ್ತರವಿದೆ.



# ಭಾರತದ ಸಂವಿಧಾನ

## ಪೀಠಿಕೆ

ಭಾರತದ ಪ್ರಜೆಗಳಾದ ನಾವು,
ಭಾರತವನ್ನು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ
ಪ್ರಜಾಸತ್ತಾತ್ಮಕ ಗಣರಾಜ್ಯವನ್ನಾಗಿ
ರೂಪಿಸುವುದಕ್ಕಾಗಿ;
ಭಾರತದ ಎಲ್ಲಾ ಪ್ರಜೆಗಳಿಗೆ
ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು;
ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು
ಉಪಾಸನೆಯ ಸ್ವಾತಂತ್ರ್ಯವನ್ನು;
ಸ್ಥಾನಮಾನ ಮತ್ತು ಅವಕಾಶಗಳ ಸಮತೆಯನ್ನು
ದೊರೆಯುವಂತೆ ಮಾಡುವುದಕ್ಕಾಗಿ;
ವ್ಯಕ್ತಿಗೌರವ, ದೇಶದ ಏಕತೆ ಮತ್ತು ಸಮಗ್ರತೆಗಾಗಿ ಎಲ್ಲರಲಿ
ಭ್ರಾತೃತ್ವ ಭಾವನೆಯನ್ನು ಮೂಡಿಸುವುದಕ್ಕೆ
ದೃಢಸಂಕಲ್ಪ ಮಾಡಿ,
ನಮ್ಮ ಸಂವಿಧಾನ ಸಭೆಯಲ್ಲಿ
1949ನೆಯ ಇಸವಿಯ ನವೆಂಬರ್ ತಿಂಗಳ 26ನೇ ದಿನವಂದು
ಈ ಸಂವಿಧಾನವನ್ನು ನಮಗೆ ನಾವೇ ಅರ್ಪಿಸಿಕೊಂಡು,
ಅಂಗೀಕರಿಸಿ, ಶಾಸನವಾಗಿ ವಿಧಿಸಿಕೊಂಡಿದ್ದೇವೆ.

